# ಅಬ್ಬಲೂರು ಏಕಾಂತ ರಾಮಯ್ಯ ಹಾಗೂ ಪರಂಪರೆ

(ಎಂ.ಫಿಲ್., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಸಂಪ್ರಬಂಧ)


**ಸಂಶೋಧಕರು**

**ಶ್ರೀಧರಮೂರ್ತಿ. ಕೆ.ಯು**

ನೋಂದಣಿ ಸಂಖ್ಯೆ: ೧೬೦೧೦೬೦೩೦೦೨೮

**ಮಾರ್ಗದರ್ಶಕರು**

**ಡಾ. ಕಲವೀರ ಮನ್ವಾಚಾರ**

ಪ್ರಾಧ್ಯಾಪಕರು



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬


೨೦೧೬--೨೦೧೭

# ಅಬ್ಬಲೂರು ಏಕಾಂತ ರಾಮಯ್ಯ ಹಾಗೂ ಪರಂಪರೆ

(ಎಂ.ಫಿಲ್, ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಸಂಪ್ರಬಂಧ)



ಸಂಶೋಧಕರು

ಶ್ರೀಧರಮೂರ್ತಿ.ಕೆ.ಯು

ನೋಂದಣಿ ಸಂಖ್ಯೆ: ೧೬೦೧೯೦೩೦೦೨೮

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರಾಧ್ಯಾಪಕರು



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬-೧೭

## ಸಂಶೋಧಕರ ಪ್ರಮಾಣ ಪತ್ರ

**ಅಬ್ಬಲೂರು ಏಕಾಂತ ರಾಮಯ್ಯ ಹಾಗೂ ಪರಂಪರೆ.** ಎಂಬ ಸಂಪ್ರಬಂಧವನ್ನು **ಡಾ. ಕಲವೀರ ಮನ್ವಾಚಾರ** ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಶ್ರೀಧರಮೂರ್ತಿ. ಕೆ.ಯು**
Sridhara Murthy K.U.
ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 30/08/17

## ಮಾರ್ಗದರ್ಶಕರ ದೃಢೀಕರಣ ಪತ್ರ

**ಅಬ್ಬಲೂರು ಏಕಾಂತ ರಾಮಯ್ಯ ಹಾಗೂ ಪರಂಪರೆ**. ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಶ್ರೀಧರಮೂರ್ತಿ.ಕೆ.ಯು** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಡಾ. ಕಲವೀರ ಮನ್ವಾಚಾರ

ಮಾರ್ಗದರ್ಶಕರು

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ,

ವಿದ್ಯಾರಣ್ಯ-೫೮೩ ೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ:

ಹಂಪಿ

## ಪರಿವಿಡಿ

## ಅಧ್ಯಾಯ ೧ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ಸ್ವರೂಪ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಸ್ವರೂಪ

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ಸ್ವರೂಪ

## ಪೀಠಿಕೆ

ಭಾರತೀಯ ಸಾಂಸ್ಕೃತಿಕ ಪರಂಪರೆ ಅಭೂತ ಪೂರ್ವವಾದದ್ದು, ಸಾವಿರಾರು ನದಿಗಳ ಸಂಗಮದ ಮಹಾನದಿಯಂತೆ ಭಾರತೀಯ ಸಂಸ್ಕೃತಿಯು ಸಮಷ್ಠಿಯನ್ನು ಪಡೆದುಕೊಂಡಿದೆ. ಈ ಸಂಸ್ಕೃತಿಯ ಮಹಾಪ್ರವಾಹದಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ನಿರ್ವಹಿಸಿರುವುದು ಧರ್ಮಗಳು. ಮಾನವನ ಸಾಂಸ್ಕೃತಿಕ ಜೀವನಾಡಿ ಧರ್ಮ, ಧರ್ಮವೇ ಭಾರತೀಯರ ಸಂಸ್ಕೃತಿಯ ಬದುಕಿಗೆ ಮಾರ್ಗದರ್ಶಿ.

ಸಂಸ್ಕೃತಿ ಎನ್ನುವುದು ಸಮಾಜ, ಸಮೂಹ, ನಡೆ, ನುಡಿ, ಆಚಾರ, ವಿಚಾರ, ನಂಬಿಕೆ ಆಚರಣೆಗಳ ಕ್ರೂಢೀಕೃತ ಮೊತ್ತ, ಅದು ಇತಿಹಾಸವು ಹೌದು, ಸಂಸ್ಕೃತಿಯೂ ಹೌದು, ಪ್ರಾಚೀನ ಕಾಲದಿಂದಲು ವಿವಿಧ ಧರ್ಮಗಳು ಬೆಳೆದುಬಂದು ಜನತೆಯ ಧಾರ್ಮಿಕ ಸಮನ್ವಯತೆ, ಸಹಿಷ್ಣುತೆಯನ್ನು ಅನುಸರಿಸಿದ ಧರ್ಮಗಳ ಅನುಯಾಯಿಗಳಿಗೆ ಧಾರ್ಮಿಕ ಸ್ವತಂತ್ರವನ್ನು ನೀಡಿ ಆ ಕಾಲದ ರಾಜ್ಯ ಆಡಳಿತದ ಮುಖ್ಯ ಲಕ್ಷಣವಾಗಿ ಧರ್ಮ ಸಮನ್ವಯತೆ ಪ್ರಭಾವಬೀರಿತ್ತು. ಸ್ವಧರ್ಮ ರಕ್ಷಣೆ ಮತ್ತು ಪರಧರ್ಮ ಸಹಿಷ್ಣತೆ ಎನ್ನುವುದು ಅಂದಿನ ಕಾಲದ ಅರಸರ ಧ್ಯೇಯವಾಗಿತ್ತು.

ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಷ್ಟೇ ಅಲ್ಲ. ಅಲ್ಲಿ ಬದುಕಿದ ಜನ, ಈಗೆ ಬದುಕಿದ ಜನರ ಒಂದು ಗಣನೀಯವಾದ ಒಂದು ಭಾಗ, ಆ ನಾಡನ್ನಾಳಿದ ರಾಜಸಮೂಹ ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಆ ಜನತೆ ಬದುಕಿದ ರೀತಿಯ ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನದ ಸಮಸ್ಯೆಗಳು, ಜೀವನದ ಮೌಲ್ಯಗಳು, ಇತ್ಯಾದಿ ವಿವರಣೆಯೇ ಆ ದೇಶದ ಇತಿಹಾಸ.

ಧರ್ಮವು ಮಾನವನ ಅಂತರಂಗದ ಶಾಶ್ವತ ಅವಶ್ಯಕತೆಯಾಗಿದೆ. ನೊಂದಮಾನವನು ಜೀವಶಾಂತಿಗಾಗಿ, ಸಮಾಧಾನಕ್ಕಾಗಿ ಪರಿತಪಿಸುತ್ತಾನೆ. ಶಾಶ್ವತ ಶಾಂತಿಯ ಅಂಬಲದಿಂದ ಪೀಡಿತವಾದ ಮನಸ್ಸು ಸುತ್ತಲಿನ ಕತ್ತಲೆಯನ್ನು ಆರಿಸುವ ಬೆಳಕಿಗಾಗಿ ತಡಕಾಡಿದಾಗ ಧರ್ಮದ ಆಪೇಕ್ಷೆ ಉದಯವಾಗುತ್ತದೆ. ಮಾನವನ ಜೀವನ ತುಂಬಾ ಅವ್ಯಕ್ತ ಭಯ ಹಾಸುಹೊಕ್ಕಾಗಿದೆ. ಸಂಸ್ಕೃತಿಯ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಮಾನವನಿಗೆ ತನ್ನ ಬದುಕಿನ ನಿರ್ಮಾಣದ ಜೊತೆ ಜೊತೆಯಾಗಿ ವಿನಾಶದ ಭೀತಿ ಉಂಟಾಗುತ್ತದೆ. ಅವನ ಮನಸ್ಸಿನಲ್ಲಿ ಹುದುಗಿರುವ ಸತ್ಯವು ಗೋಚರವಾಗುತ್ತದೆ. ಈ ಭೀತಿಯಿಂದ ಮುಕ್ತನಾಗಲು, ವಿನಾಶದ ಅಂಚಿನಿಂದ ತಪ್ಪಿಸಿಕೊಳ್ಳಲು ಆತ ತನಗಿಂತ ಉತ್ತಮವಾದ ಶಕ್ತಿಗಳನ್ನು ಆರಾಧಿಸಿ ಅವುಗಳ ಮೊರೆಹೋಗಿದ್ದಾನೆ.

ಹೀಗೆ ಮಾನವನ ಆರಾಧನೆಯು ಒಂದು ಸಾಂಸ್ಥಿಕ ರೂಪವನ್ನು ಪಡೆದುಕೊಳ್ಳುತ್ತ, ಧರ್ಮದ ರೂಪವನ್ನು ತಾಳಿತು. ನಂತರ ಭಾರತದಲ್ಲಿ ಅನೇಕ ಧರ್ಮಗಳು ಉದಯಿಸಿ ಪ್ರವರ್ಧಮಾನಕ್ಕೆ ಬಂದವು. ಹೀಗೆ ಪ್ರವರ್ಧಮಾನಕ್ಕೆ ಬಂದ ಹಲವಾರು ಧರ್ಮಗಳೆಂದರೆ, ಜೈನಧರ್ಮ, ಬೌದ್ಧ ಧರ್ಮ, ವೈಷ್ಣವಧರ್ಮ, ಶೈವಧರ್ಮಗಳು ರಾಜನಿಂದ ಮನ್ನಣೆ ಪಡೆದಿದ್ದವು. ಒಂದು ಧರ್ಮಕ್ಕೂ ಮತ್ತೊಂದು ಧರ್ಮಕ್ಕೂ ಸಂಘರ್ಷಗಳು ಉಂಟಾಗಿದೆ. ತಮ್ಮ ಧರ್ಮವನ್ನು ಉಳಿಸಿಕೊಳ್ಳಲು ಅನೇಕ ಪವಾಡಗಳು ನಡೆದು ಬಂದಿವೆ. ಈ ಹಿನ್ನೆಲೆಯಲ್ಲಿ ಕಾಳಾಮುಖ ಪರಂಪರೆಗೆ ಸೇರಿದ ಅಬ್ಬಲೂರು ಚರಿತೆಯ ಏಕಾಂತ ರಾಮಯ್ಯ ತಮ್ಮ ಶೈವಧರ್ಮಕ್ಕೆ ತನ್ನ ಶಿರವನ್ನೆ ಪಣವಾಗಿಟ್ಟು ಹೋರಾಟಮಾಡಿ ತನ್ನ ಧರ್ಮಶ್ರೇಷ್ಠತೆಯನ್ನು ಮೆರೆದಿದ್ದಾನೆ.

ಇಲ್ಲಿ ಪ್ರಮುಖವಾಗಿ ಏಕಾಂತ ರಾಮಯ್ಯನ ಪೂರ್ವಜರು ಕಾಳಾಮುಖ ಪರಂಪರೆಗೆ ಸೇರಿದ್ದರೆಂದು ಹೇಳಲು ಅನೇಕ ನಿದರ್ಶನಗಳು ನಮಗೆ ದೊರೆಯುತ್ತವೆ. ಈ ನಿಟ್ಟಿನಲ್ಲಿ ನಾವು ಏಕಾಂತ ರಾಮಯ್ಯ ಹಾಗೂ ಅವರ ಪರಂಪರೆಯೂ ಇಂದಿಗೂ ಕೂಡ ಕಾಣಬಹುದು. ಏಕಾಂತ ರಾಮಯ್ಯನನ್ನು ಕುರಿತು ಹಲವಾರು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳೂ ಇವೆ. ಆದ ಕಾರಣ ಈ ಅಧ್ಯಯನವು ವಿಭಿನ್ನ ನೆಲೆಗಟ್ಟಿನಲ್ಲಿ ನೋಡಬೇಕಾಗಿದೆ. ಈ ಕಾರಣದಿಂದ ಅಬ್ಬಲೂರು ಚರಿತೆಯ ಏಕಾಂತರಾಮಯ್ಯನ ಪರಂಪರೆಯನ್ನು ಕುರಿತು ಈ ಅಧ್ಯಯನವು ಮುಖ್ಯ ಗುರಿಯಾನ್ನಾಗಿಸಿಟ್ಟುಕೊಂಡಿದೆ.

### ೧.೧ ಅಧ್ಯಯನದ ಉದ್ದೇಶ

ಪ್ರತಿಯೊಂದು ಕಾರ್ಯಕ್ಕೂ ಒಂದು ಉದ್ದೇಶವಿರುವಂತೆ ಪ್ರಸ್ತುತ ಅಧ್ಯಯನಕ್ಕು ಒಂದು ಉದ್ದೇಶವಿದೆ. ಇಲ್ಲಿ ಪ್ರಮುಖವಾಗಿ ಶೈವಧರ್ಮದ ಮಹಾ ಪುರುಷನಾದ ಕಾಳಾಮುಖ ಪರಂಪರೆಗೆ ಸೇರಿದ ಏಕಾಂತ ರಾಮಯ್ಯನ ಪೂರ್ವಜರು ಬಳ್ಳಿಗಾವಿ, ಅಬ್ಬಲೂರು, ನೆಸ್ವಿ, ಅಲ್ಲದೆ ಕರ್ನಾಟಕದಲ್ಲಿ ಕಾಳಾಮುಖ ಪರಂಪರೆಯ ಆಚರಣೆಗಳು ಅಲ್ಲಲ್ಲಿ ಕಾಣಸಿಗುತ್ತವೆ.

ಅವರ ವಂಶಜರು ಇಂದಿಗೂ ಕೂಡ ಇದ್ದು, ಅನೇಕ ಆಚರಣೆಗಳು, ಬದುಕಿದ ರೀತಿ ನೀತಿಗಳು, ನಂಬಿಕೆಗಳು, ಅವರ ಪೂಜಾ ವಿಧಿವಿಧಾನಗಳು, ಕಟ್ಟಿದ ಕಲೆ ಧಾರ್ಮಿಕ ಮತ್ತು ಸಾಮಾಜಿಕಸ್ಥಿತಿ ಅವರ ಕುಲಕಸುಬುಗಳು, ಈ ಹಿನ್ನೆಲೆಯಲ್ಲಿ ಏಕಾಂತರಾಮಯ್ಯನನ್ನು ಕುರಿತು ಶಾಸನಗಳು, ಕುರುಹುಗಳು, ಅವರ ಧರ್ಮ ಶ್ರೇಷ್ಠತೆಗಾಗಿ ಮಾಡಿದ ಪವಾಡಗಳು ಕುರಿತು ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನದೊಂದಿಗೆ ಏಕಾಂತರಾಮಯ್ಯನ ಪರಂಪರೆಯನ್ನು ಕಟ್ಟಿಕೊಡುವ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ.

### ೧.೨ ಅಧ್ಯಯನದ ವ್ಯಾಪ್ತಿ

ಸಂಶೋಧನೆ ಯಶಸ್ಸು ಪಡೆಯಲು ಅ ಸಂಶೋಧನೆ ವ್ಯಾಪ್ತಿ ಅಥವಾ ಮಿತಿ ಇರುವುದು ಮುಖ್ಯ ಒಂದು ನಿರ್ದಿಷ್ಟ ಹಾಗೂ ಉದ್ದೇಶ ಪೂರಿತವಾದ ಸಂಶೋಧನೆ, ಸಂಶೋಧಕನಿಗೆ ಗೊಂದಲ ನಿವಾರಿಸುತ್ತದೆ. ನಿರ್ದಿಷ್ಟ ವ್ಯಾಪ್ತಿಯಲ್ಲಿ ರೂಪಗೊಂಡ ಸಂಶೋಧನೆ ಮಾತ್ರ ಕ್ರಮಬದ್ದವಾದ ಹಾಗೂ ಸ್ಪಷ್ಟವಾದ ಅಧ್ಯಯನವನ್ನು ಕಟ್ಟಿಕೊಡಲು ಸಾಧ್ಯ. ಅಧ್ಯಯನದ ವ್ಯಾಪ್ತಿಯನ್ನು ಕ್ರಿ.ಶ. ಒಂಬತ್ತನೆಯ ಶತಮಾನದಿಂದ ಆಧುನಿಕ ಕಾಲದವರೆಗೂ ವಿಸ್ತರಿಸಿ ಕೊಳ್ಳಲಾಗಿದೆ. ಒಂಬತ್ತರಿಂದ ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ ಕಾಳಾಮುಖ ಪರಂಪರೆಯನ್ನು ಹೆಚ್ಚು ವ್ಯಾಪಕವಾಗಿ ಒಳಗೊಂಡ ಹಾವೇರಿ ಜಿಲ್ಲೆಯ ಸುತ್ತಮುತ್ತ ಪ್ರದೇಶಗಳು ವ್ಯಾಪಕವಾಗಿ ಬೆಳೆದಿವೆ. ಹಾವೇರಿ ಜಿಲ್ಲೆಯ ಅಬ್ಬಲೂರು, ಅಂತರವಳ್ಳಿ, ಈ ರೀತಿಯಾಗಿ ಪ್ರಾದೇಶಿಕ ವ್ಯಾಪ್ತಿಯನ್ನು ಒಳಗೊಂಡು ಮೂರುಜಾವಿ ಪರಂಪರೆಯನ್ನು ಪ್ರಸ್ತುತ ಅವಧಿಯವರೆಗೂ ವ್ಯಾಪ್ತಿಯನ್ನಾಗಿಸಿ ಕೊಳ್ಳಲಾಗಿದೆ.

### ೧.೩ ಅಧ್ಯಯನದ ಸ್ವರೂಪ

ಪ್ರಸ್ತುತ ಈ ಪ್ರಬಂಧವು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳನ್ನು ಒಳಗೊಂಡಿದೆ. ಈ ಅಧ್ಯಯನದಲ್ಲಿ ಅವಶ್ಯಕತೆಗೆ ತಕ್ಕಂತೆ ವಿವಿಧ ವಿಭಾಗಳನ್ನಾಗಿ ಮಾಡಿಕೊಳ್ಳಲಾಗಿದೆ. ಈ ಅಧ್ಯಯನ ಒಳಗೊಂಡಿರುವ ವಿಷಯ ಮತ್ತು ಸ್ವರೂಪ ಈ ಕೆಳಗಿನಂತಿದೆ.

ಒಂದನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಏಕಾಂತ ರಾಮಯ್ಯ ಮತ್ತು ಶೈವಧರ್ಮ ಇದಕ್ಕೆ ಸಂಬಂಧಿಸಿದಂತೆ ಶೈವಧರ್ಮದ ಉಗಮ ಮತ್ತು ಬೆಳವಣಿಗೆ, ಶೈವಧರ್ಮದ ವಿವಿಧ ಶಾಖೆಗಳಾದ ಲಕುಲೀಶ ಪಂಥ, ಕಾಳಮುಖ ಪಂಥ, ಶೈವಧರ್ಮದ ಹನ್ನೆರಡನೆಯ ಶತಮಾನದಲ್ಲಿ ರಾಜಕೀಯ ಸ್ಥಿತಿ ಮತ್ತು ಏಕಾಂತ ರಾಮಯ್ಯನ ಹುಟ್ಟು ಮತ್ತು ಬೆಳವಣಿಗೆ, ಅವನ ಏಕಾಂತವಾದ ಭಕ್ತಿಯನ್ನು ಕುರಿತು ವಿವರಣೆಯನ್ನು ನೀಡಲಾಗಿದೆ.

ಮೂರನೆ ಅಧ್ಯಾಯದಲ್ಲಿ ಏಕಾಂತ ರಾಮಯ್ಯ ಮತ್ತು ಜೈನರೊಡನೆ ಸಂಘರ್ಷ ಇದರ ಹಿನ್ನಲೆಯಲ್ಲಿ ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಜೈನಧರ್ಮ ಸ್ಥಿತಿಗತಿ ಅವರ ಪ್ರಾಬಲ್ಯ, ಅನೇಕಾಂತವಾದ ವಿಚಾರಗಳನ್ನು ತಿಳಿಸಲಾಗಿದೆ. ಹಾಗೂ ಏಕಾಂತ ರಾಮಯ್ಯ ಶೈವಧರ್ಮದ ಶ್ರೇಷ್ಠತೆಗಾಗಿ ಅವನ ಪವಾಡ, ಜೈನರೊಂದಿಗೆ ಅವನ ಸಂಘರ್ಷವನ್ನು ಮತ್ತು ಶಿವಲಿಂಗ ಪ್ರತಿಷ್ಠಾಪನೆ, ಅಬ್ಬಲೂರು ಶಾಸನ ಚಿತ್ರಣವನ್ನು ಕೊಡಲಾಗಿದೆ.

ನಾಲ್ಕನೆ ಅಧ್ಯಾಯದಲ್ಲಿ ಏಕಾಂತ ರಾಮಯ್ಯನ ಕುರಿತ ಶಾಸನಗಳು ಮತ್ತು ಅವನ ಪರಂಪರೆಯನ್ನು ಕುರಿತು ಹೇಳಲಾಗಿದೆ. ಏಕಾಂತ ರಾಮಯ್ಯನ ಕುರಿತು ಕರ್ನಾಟಕದಲ್ಲಿ ದೊರೆತ ಶಾಸನಗಳಾದ ಬಂದಳಿಕೆ, ಅಬ್ಬಲೂರು, ಭೋಗಾವಿ, ಶಾಸನಗಳು ಏಕಾಂತ ರಾಮಯ್ಯನ ಕುರಿತು ಹೇಳುತ್ತವೆ. ಅಲ್ಲದೆ ಏಕಾಂತ ರಾಮಯ್ಯನ ಕೊನೆಯ ಜೀವಿತದ ಕಾಲ ಮತ್ತು ಮೂರುಜಾವಿ ಮಠದ ಪರಂಪರೆಗೆ ಸೇರಿದವನು ಎಂಬುದನ್ನು ತಿಳಿಸಲಾಗಿದೆ.

ಐದನೆ ಅಧ್ಯಾಯದಲ್ಲಿ ಸಮಾರೋಪ ಎಂದಿದ್ದು, ಅದರಲ್ಲಿ ಅಧ್ಯಯನದ ಫಲಿತಗಳು ಹಾಗೂ ಏಕಾಂತ ರಾಮಯ್ಯನ ಕುರಿತ ಹಿರೇಕೆರೂರು ತಾಲೂಕಿನ ನಕ್ಷೆ, ಶಾಸನ ಛಾಯಾಚಿತ್ರಗಳು ಹಾಗೂ ಆಕಾರ ಗ್ರಂಥಗಳನ್ನು ನೀಡಲಾಗಿದೆ.

# ಅಧ್ಯಾಯ ೨ ಏಕಾಂತ ರಾಮಯ್ಯ ಮತ್ತು ಶೈವಧರ್ಮ

# ಅಧ್ಯಾಯ ೨

## ಏಕಾಂತ ರಾಮಯ್ಯ ಮತ್ತು ಶೈವಧರ್ಮ

ಹನ್ನೆರಡನೆ ಶತಮಾನದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಇತಿಹಾಸಕ್ಕೆ ಏಕಾಂತರಾಮಯ್ಯನ ಹೆಸರು ಶೈವಧರ್ಮದ ಧಾರ್ಮಿಕ ಚರಿತ್ರೆಯಲ್ಲಿ ಎದ್ದು ಕಾಣುವಂತದ್ದು.

ಕನ್ನಡನಾಡು ವಿವಿಧ ಮತಧರ್ಮಗಳ ತವರೂರು. ಪ್ರತಿಯೊಂದು ಮತ ಧರ್ಮವು ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯ ಪಾತ್ರವಹಿಸಿದೆ. ಈ ಕಾಲದಲ್ಲಿ ಅಂದರೆ ಹನ್ನೊಂದನೆಯ ಶತಮಾನದಿಂದೀಚೆಗೆ ಜೈನಮತ, ವೈಷ್ಣವಮತ, ಶೈವಮತಗಳಲ್ಲಿ ಶ್ರೇಷ್ಠತೆಯ ಸಲುವಾಗಿ ವಾದ ಪ್ರತಿವಾದಗಳು ಉಂಟಾಗಿ ಅಲ್ಲದೆ ಕೆಲವು ಪವಾಡಗಳ ಅಂಶಗಳನ್ನು ಕಾಣಬಹುದು. ಶೈವಧರ್ಮದವರು ತಮ್ಮ ಧರ್ಮವನ್ನು ಉಳಿಸಿಕೊಳ್ಳಲು ಶಿರವನ್ನೇ ಕತ್ತರಿಸಿಕೊಂಡು ಅದನ್ನು ಪಣಕ್ಕೆ ಇಡುವ ವರೆಗೂ ಆಯಾಮತಭಿಮಾನಗಳಲ್ಲಿ ವೀರಾವೇಶದ ಕಾವು ಉಂಟಾಗಿತ್ತು. ಎಂಬುದನ್ನು ನಾವು ಶಾಸನ ಮತ್ತು ಕಾವ್ಯಗಳಿಂದ ತಮ್ಮ ಧರ್ಮವನ್ನು ರಕ್ಷಿಸಿಕೊಳ್ಳಲು ಹೋರಾಟ ಮಾಡುತ್ತಿದ್ದರೆಂದು ತಿಳಿಯಲಾಗುತ್ತದೆ.

ಇಲ್ಲಿ ಅನ್ಯಧರ್ಮದೊಂದಿಗೆ ಹೋರಾಟಮಾಡಿ ತಮ್ಮ ಧರ್ಮವನ್ನು ಕಾಪಾಡಲು ತಮ್ಮ ಪ್ರಾಣವನ್ನು ಕೊಡಲು ಸಿದ್ದರಿದ್ದರೆಂದು ಕಂಡುಬರುತ್ತದೆ. ಇದರಲ್ಲಿ ಅನೇಕ ಮಹಾಪುರುಷರ ಚರಿತ್ರೆಯನ್ನು ನಾವು ಮನಗಾಣಬಹುದು ಅದರಲ್ಲಿಯೂ ಏಕಾಂತರಾಮಯ್ಯನು ಒಬ್ಬ ಶಿವನ ಆರಾಧಕನಾಗಿ ಶೈವಧರ್ಮದ ಉಳಿವಿಗಾಗಿ ಹೋರಾಟ ಮಾಡಿ ತಮ್ಮ ಧರ್ಮವನ್ನು ಕಾಪಾಡಿಕೊಂಡ ಬಗೆಯು ಈ ಶಾಸನದಲ್ಲಿ ಕಂಡುಬರುತ್ತದೆ.

### ೨.೧ ಶೈವಧರ್ಮ :

ಈ ಶೈವಧರ್ಮದ ಅಧಿದೇವತೆ ಶಿವನು. ವೇದಗಳಕಾಲವನ್ನು ನಾವು ನೋಡಿದಾಗ ಶಿವನಾದನೆಚಿದು ತಿಳಿದುಬರುತ್ತದೆ. ಶಿವನೆಚಿದರೆ ಕಲ್ಯಾಣಕಾರ ಶಿವ ಶಬ್ಧದ ವ್ಯತ್ಪತ್ತಿಯನ್ನು ತೃಪ್ತಿಕರವಾಗಿ ಹೇಳುವುದು ಕಷ್ಟ. ಕೆಲವು ಪಚಿಡಿತರ ಪ್ರಕಾರ ಅದರಲ್ಲೂ 'ತಮಿಳು' ಪಚಿಡಿತರು ಶಿವಶಬ್ಧವನ್ನು 'ಶಿವಪ್ಪು' (ಕೆಂಪು) ಶಬ್ದದಿಂದ ಬಂದಿರಬಹ್ಮದೆಂದು ಊಹಿಸುತ್ತಾರೆ.

"ಮೊಹೆಚಿಜೆದಾರೊದಲ್ಲಿ ಪ್ರಾಚ್ಯವಸ್ತು ಸಂಶೋಧನೆ ಶಾಖೆಯವರು ಭೂಮಿಚಿುನ್ನು ಅಗೆಯುವಾಗ ದೊರೆತ ಅನೇಕ ವಸ್ತುಗಳಲ್ಲಿ ಯೋಗಮುದ್ರೆಯಿಚಿದ ಕುಳಿತ ವ್ಯಕ್ತಿಯ ಆಕೃತಿಯ ಬಿಲ್ಲೆಗಳು ಇರುತ್ತವೆ ಇದು ಸಮಾಧಿಯಲ್ಲಿದ್ದ ಶಿವನ ಚಿತ್ರವೆಚಿದು ಸಂಶೋಧಕರು ಹೇಳುತ್ತಾರೆ"[೧] ಮೊಹೆಂಜೆದಾರೊ ಸಂಸ್ಕೃತಿಯ ಬಗ್ಗೆ ನಮಗೆ ಇನ್ನೂ ಸಂಪೂರ್ಣವಾಗಿ ಗೊತ್ತಾಗಿಲ್ಲವಾದ್ದರಿಂದ ವೈಧಿಕ ಕಾಲದಿಂದ ಇಲ್ಲಿಯವರೆಗೆ ಆರ್ಯರ ಧಾರ್ಮಿಕ ಸಾಹಿತ್ಯದಲ್ಲಿ ಶಿವನ ಒಂದು ಸ್ಥಾನವನ್ನು ನೋಡಬಹುದು.

ಶಿವನು, ಶಂಖರನು, ನೀಲಕಂಠನು ಆಗಿದ್ದು ಪರ್ವತಗಳಲ್ಲಿಯೂ ಜನರು ವಾಸಮಾಡದಂತಹ ಸ್ಥಳಗಳಲ್ಲಿ ವಾಸಮಾಡುವವನು ಎಂಬುದು ಜನರ ನಂಬಿಕೆ. ಧರ್ಮಾಕ್ರಮಿಗಳು, ಸೈನಿಕರು, ಕಳ್ಳರು, ಮೊಸಗಾರರು, ಕಾರಾಗೀಯರು, ಬೇಟೆಗಾರರು ಮೊದಲಾದವರ ಇಷ್ಟ ದೈವವಾಗಿದ್ದು ಈತನು ಬಹುದೊಡ್ಡ ಶಕ್ತಿಯುಳ್ಳವನು ವಿಶ್ವದ ಎಲ್ಲಾ ವಸ್ತುಗಳಲ್ಲಿ ವಾಸಿಸುವವನು ವಿಶ್ವದ ಎಲ್ಲಾ ಪ್ರಾಣಿಗಳ ಮೇಲೆ ಪ್ರಭುತ್ವವನ್ನು ನೆಡೆಸುವವನು ಆಗಿದ್ದಾನೆ. ಈತನನ್ನು ಋತ್ವಿಜರ ದೇವತೆಯಲ್ಲ, ಸಾಮಾನ್ಯರ ದೇವತೆಯೆಂದು ಹೇಳುತ್ತಾರೆ.

ಶಿವನು ದೊಡ್ಡ ಯೋಗಿ, ವಿಶ್ವದಶಕ್ತಿ ಸ್ವರೂಪದ ಮಾಂತ್ರಿಕನು, ಭೂತನಾಯಕನು, ಮಹಾಕಾಲನು, ಮೃತ್ಯುಂಜಯನು ಪ್ರಾಣಿಕೊಠಿಯನ್ನೆಲ್ಲ ತನ್ನಲ್ಲೆ ಇಟ್ಟುಕೊಂಡಿರುವವನು ಉತ್ಪತ್ತಿಯ ಅಧಿದೇವತೆಯಾದುದ್ದರಿಂದ ಅರ್ಧನಾರೇಶ್ವರನೂ ಆಗಿದ್ದಾನೆ. ಶಿವನ ಸಾಕಾರ ರೂಪದ ವರ್ಣನೆ ಸ್ಪಷ್ಟವಾಗಿ ತಿಳಿಯುತ್ತದೆ. ಶಿವನ ವಾಸಸ್ಥಳ ಸರ್ವತ್ರವಿದ್ದರು ಕೈಲಾಸ ಮುಖ್ಯವಾದದ್ದು ಶಿವನನ್ನು "ಮುಕ್ಕಣ್ಣನು ಬಾಲೇಂದುಧರನು, ಗಂಗಾಧರನು, ಈತನ ಕಂಠ ನೀಲವರ್ಣವಾಗಿದ್ದು. ಅದರ ಸುತ್ತಲು ಸರ್ಪವೂ ರುಂಡಮಾಲೆಯೂ ಇರುವವು" ಕೈಯಲ್ಲಿ ತ್ರಿಶೂಲ ಡಮರುಗ ಇರುವುದು ಶಿವನನ್ನು ಅನೇಕ ವಿಧಗಳಿಂದ ಪೂಜಿಸುವರು. ಈತನು ಮಹಾದೇವನು, ಹರನು, ಭೈರವನು, ಪಶುಪತಿ, ಗಣಪತಿಯ ಸ್ಕಂದನೂ ಈತನ ಮಕ್ಕಳಾಗಿರುವನು, ಪಾರ್ವತಿಯು ಶಿವನ ಅರ್ಧಾಂಗಿ, ನಂದಿ ಶಿವನ ವಾಹನ, ನಿರಾಕಾರ ರೂಪದ ವರ್ಣನೆಯು ಸ್ಪಷ್ಟವಾಗಿದೆ. ಶಿವನು ಸಚ್ಚಿದಾನಂದ, ನಿತ್ಯಪರಿಪೂರ್ಣ, ಸರ್ವಶಕ್ತಿ, ಸರ್ವಜ್ಞಾನಿ, ಸರ್ವಕರ್ತ, ಸರ್ವಾಂತರರ್ಯಾಮಿ, ನಿಷ್ಕಲ, ನಿರಂಜನ, ನಿರಾವರ್ಣ, ಪರಬ್ರಹ್ಮ ಆದುದರಿಂದ ನಿರಾಕಾರ ರೂಪದಿಂದ ಪೂಜಿಸುವ ರೂಢಿ ಬಂದಿರಬೇಕೆಂದು ಪೂಜೆಗೆ ಸಕಲ ರೂಪವಾದ ವಿಗ್ರಹ ಅಷ್ಟು ಯೋಗ್ಯವಾದುದ್ದಲ್ಲವೆಂದು ಹೇಳುವವು. ಆದರೆ ಶಿವನ ಪೂಜೆಯು ಯಾವಕಾಲದಲ್ಲಿ ಪ್ರಾರಂಭವಾಯಿತೆಂದು ಹೇಳಲು ಸಾಧ್ಯವಿಲ್ಲ.[೨]

ಲಿಂಗ ಪೂಜೆಯನ್ನು ಕುರಿತು ಅದರ ಬಗ್ಗೆ ವಿಪರೀತಾರ್ಥವನ್ನು ಕಲ್ಪಿಸಿ ಲಿಂಗಪೂಜಕರ ಮನಸ್ಸಿಗೆ ಮುಟ್ಟುವಂತೆ ಅರ್ಥಮಾಡಿಸುವರು. ಋಗ್ವೇದದಲ್ಲಿ ಒಂದೆರಡು ಕಡೆಯಲ್ಲಿ 'ಶಿಶ್ನದೇವ' ಎಂಬುದು ಲಿಂಗಪೂಜಕರಿಗೆ ಸಂಬಂದಪಟ್ಟಿದೆ ಎಂದೂ ಲಿಂಗವೆಂದರೆ ಶಿಶ್ನದೇವರೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.[೩] ಲಿಂಗಪೂಜೆಯ ಇತಿಹಾಸವನ್ನು ನಾವು ಸೂಕ್ಷ್ಮವಾಗಿ ಗಮನಿಸಿದಾಗ ಎರಡು ಸಾವಿರ ವರ್ಷಗಳಿಂದ ಲಿಂಗಕ್ಕೆ ಶಿಶ್ನ ದೇವರೆಂದು ಕರೆಯುವುದು ಸರಿ ಹೊಂದುವುದಿಲ್ಲವೆಂದು ಹೇಳಬಹುದು.

ಶಿಶ್ನ ದೇವರಬಗ್ಗೆ "ಚಾರ್ಲ್ಸ್ ಇಲಿಯಟ್"ರ ಅಭಿಪ್ರಾಯವೆಂದರೆ ವೇದಗಳಲ್ಲಿ ಲಿಂಗದ ಉಲ್ಲೇಖವಿಲ್ಲ. ವೇದಕಾಲದ ಜನರಿಗೆ ಲಿಂಗ ಗೊತ್ತಿದ್ದಿಲ್ಲ, ಋಗ್ವೇದ ಮಂಡಲ ೭, ಸೂಕ್ತ ೨೧, ಮಂತ್ರ ೫, ಮಂಡಲ ೯, ಸೂಕ್ತಿ ೯೯, ಮಾತ್ರ ೩ ಇವುಗಳಲ್ಲಿ ಬಂದ ದೇವರನ್ನು ಇಂದ್ರನು ನಾಶಮಾಡಲಿ

ಎಂಬಲ್ಲಿಯ ಶಿಶ್ನ ದೇವಾ! ಎಂಬ ಶಬ್ದ ಒಂದು ಪ್ರಕಾರದ ರಾಕ್ಷಸರಿಗೆ ಹತ್ತುವುದೋ ಅಥವಾ ಶಿಶ್ನವೇ ದೇವ್ಯರಾದ ಜನರಿಗೆ ಹತ್ತುವುದೋ ಎಂಬುದು ನಿರ್ಣಯವಾಗಿಲ್ಲ.[೪] ಎಂದುಹೇಳಿದ್ದಾರೆ.

ಮೊದಲು ಲಿಂಗಪೂಜೆಯನ್ನು ಮೂಲನಿವಾಸಿಗಳಾದ ಅದರಲ್ಲೂ ವಿಶೇಷವಾಗಿ ದ್ರಾವಿಡರಿಂದ ಆರ್ಯರು ತೆಗೆದುಕೊಂಡರೆಂಬ ಅಭಿಪ್ರಾಯವಿದೆ. ಇದರ ಬಗ್ಗೆ ಕೆಲವು ಅಭಿಪ್ರಾಯಗಳನ್ನು ಗಮನಿಸಬಹುದು.

- ಮೂಲನಿವಾಸಿಗಳು ಲಿಂಗವನ್ನು ಪೂಜಿಸುತ್ತಿದ್ದ ಬಗ್ಗೆ ಆಧಾರಗಳಿಲ್ಲ. ಹಿಂದೂಸ್ಥಾನದಲ್ಲಿ ಮೂಲನಿವಾಸಿಗಳ ಸಂತತಿಯವರೆಂದು ತಿಳಿಯಲ್ಪಡುವ ಬಹುತರವಾಗಿ ಎಲ್ಲಾ ಕಾಡು ಜನಗಳಲ್ಲಿ ಲಿಂಗ ಪೂಜೆಯಬಗ್ಗೆ ಪ್ರಸ್ಥಾಪವಿಲ್ಲ.
- ಲಿಂಗ ಪೂಜೆ ದಕ್ಷಿಣದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಇದು ಹಿಂದೂಸ್ಥಾನದ ಪ್ರತಿಯೊಂದು ಮೂಲೆಯಲ್ಲಿ ಮತ್ತು ಅಸ್ಸಾಂ, ನೇಪಾಳ ದೇಶಗಳಲ್ಲಿ ಪ್ರಚಾರದಲ್ಲಿದೆ.
- ಕೀಳು ತರಗತಿಯ ಜನಾಂಗದವರು ಲಿಂಗಪೂಜೆಯನ್ನು ಮಾಡುವುದಿಲ್ಲ. ಲಿಂಗಪೂಜೆಯಲ್ಲಿ ಹೇಯ ಮತ್ತು ತ್ಯಾಜ್ಯವಾದ ವಸ್ತುಗಳ ಸಂಪರ್ಕವೂ ಕೂಡ ಕಂಡುಬರುವುದಿಲ್ಲ. ಇದರ ಪೂಜೆಯನ್ನು ನಿಯಮ ಮತ್ತು ನಿಷ್ಠೆಯಿಂದ ಕೂಡಿದ ಬ್ರಾಹ್ಮಣರು ಉಚ್ಚ ತರಗತಿಯ ಜನರು ಲಿಂಗಪೂಜೆಯನ್ನು ಅಸ್ಥೆಯಿಂದ ಮತ್ತು ಭಕ್ತಿಯಿಂದ ಮಾಡುತ್ತಾರೆ. ವೀರ್ಯಾದಲ್ಲಿ ಮತ್ತು ಉತ್ಪತ್ತಿಯಲ್ಲಿ ದೈವಿಕ ಶಕ್ತಿಯಿದೆ ಎಂಬ ತತ್ವ ಮೊದಲಿನಿಂದಲು ರೂಡಿಯಲ್ಲಿತ್ತು.
- ಬೌದ್ಧ ಧರ್ಮದವರು ಸ್ತೂಪಗಳನ್ನು ಮಾಡಿ ಅದರಲೂ ಸಣ್ಣ ಸಣ್ಣ ಸ್ತೂಪಗಳನ್ನು ಮಾಡಿ ಪೂಜೆಮಾಡುತ್ತಿದ್ದರು. ಸ್ತೂಪಗಳಲ್ಲಿ ಲಿಂಗವು ಒಂದು ಸಣ್ಣ ಸ್ತೂಪದಂತೆ ಇರುವುದರಿಂದ ಶಿವನ ಚಿಹ್ನೆವೆಂದು ಸ್ವೀಕರಿಸಬಹುದಾಗಿದೆ.
- ಪ್ರಾಚೀನ ಕಾಲದಲ್ಲಿ ದೇವರ ಮತ್ತು ದೊಡ್ಡಮನುಷ್ಯರ ಸ್ಮಾರಕಕ್ಕಾಗಿ ಕಲ್ಲಿನ ಕಂಬಗಳನ್ನು ಸ್ಥಾಪಿಸಿ ಪೂಜಿಸುವ ಪರಿಪಾಠವಿತ್ತು. ಈ ಕಂಬಗಳೇ ಮುಂದೆ ಲಿಂಗವಾಗಿರಬಹುದೆಂದು ಊಹಿಸಲಾಗಿದೆ.

ಭಿಟಾಲಿಂಗ, ಮುಖಲಿಂಗವೆಂದು ಅದು ಕ್ರಿ ಪೂ. ೧೦೦ ವರ್ಷವಿದ್ದಿರಬಹುದೆಂದು ಆರ್. ಡಿ. ಬ್ಯಾನರ್ಜಿಯವರು ಅದಕ್ಕು ಪೂರ್ವವಿದ್ದಿರಬಹುದೆಂದು ಟಿ. ಗೋಪಿನಾಥ ರಾಯರು ಅಭಿಪ್ರಾಯ ಪಡುತ್ತಾರೆ. ಕಾಂಭೋಜ ದೇಶದಲ್ಲಿ ಸುಮಾರು ಕ್ರಿ ಶ. ೫೫೦ರಲ್ಲಿ ಹುಟ್ಟಿದ ಶಾಸನದಲ್ಲಿ ಲಿಂಗದ ಪ್ರತಿಷ್ಠಾಪನೆಯ ಉಲ್ಲೇಖವಿದೆ. ೫ನೇ ಶತಮಾನದಲ್ಲಿ ಸ್ಥಾವರ ಲಿಂಗ ಪೂಜೆಯಲ್ಲದೆ ಲಿಂಗವನ್ನು ಶರೀರದ ಮೇಲೆ ದರಿಸುವ ರೂಢಿ ಪ್ರಚಾರದಲ್ಲಿತೆಂದು ಕ್ರಿ ಶ. ೪೨೮ ರಲ್ಲಿ ಹುಟ್ಟಿದ ವಾಕಾಟಕ ರಾಜನಾದ ನಿನ್ನೇಯ ಪ್ರವರಸೇನನ ಶಿಲಾ ಶಾಸನದಿಂದ ತಿಳಿಯುತ್ತದೆ.[೫]

ಶೈವಧರ್ಮದ ಆಶಯ ಲಿಂಗವನ್ನು ಸದಾ ಭುಜದಲ್ಲಿ ಧರಿಸುವುದು. ಸಂತೃಷ್ಟನಾದ ಶಿವನು ಭವ ನಾಗರಿಗೆ ರಾಜ್ಯಸಂಪತ್ತನ್ನು ಒದಗಿಸಿಕೊಟ್ಟನು. ಅಲ್ಲದೆ ಶೈವಧರ್ಮದಲ್ಲಿ ಅನೇಕ ಅವಾಂತರ

ಬೇಧಗಳು ಕಂಡುಬರುತ್ತವೆ. ಶಿವನು ಸರ್ವಪ್ರಾಣಿಗಳಿಗೆ ಒಡೆಯನಾಗಿದ್ದರಿಂದ ಭೂಲೋಕದಲ್ಲಿ ಜನರು ಶಿವನನ್ನು ತಮ್ಮ ಇಷ್ಟಾನುಸಾರವಾಗಿ ಪೂಜಿಸುವರು. ಕೆಲವು ಪಂಥದವರು ಶುದ್ಧ ಮತ್ತು ಶಿಷ್ಟ ಸಮ್ಮತದಿಂದ ಪೂಜಿಸಿದರೆ ಕೆಲವು ಪಂಥಗಳು ಘೋರ ಮತ್ತು ಹೇಯವಾದ ಆಚರಣೆಗಳಲ್ಲಿ ಪೂಜಿಸುವುದು ಕಂಡುಬರುತ್ತದೆ. ಶೈವಧರ್ಮವು ಮುಂದೆ ಕಾಳಾಮುಖ ಪಂಥ, ಲಕುಲೀಶ ಪಂಥ ಮತ್ತು ವೀರಶೈವ ಪಂಥವಾಗಿ ಕರ್ನಾಟಕದಲ್ಲಿ ಪ್ರಬಲ ಮತವಾದ ಪಂಥವಾಗಿ ವಿಂಗಡನೆಯಾಗಿದೆ.

**ಶೈವಧರ್ಮದ ಉಗಮ ವಿಕಾಸ**

ಭಾರತದಲ್ಲಿ ವೈದಿಕ ಯುಗದ ಪೂರ್ವದಲ್ಲಿ ಪಶುಪತಿಯನ್ನು ಆರಾಧಿಸಿದ ಶೈವಧರ್ಮ, ವೇದೋಪನಿಷತ್ತುಗಳ ಕಾಲದಲ್ಲಿ ರುದ್ರ ಹಾಗೂ ಶಿವನ ಕಲ್ಪನೆಯು ಶೈವಧರ್ಮದಲ್ಲಿ ಕಂಡು ಬರುತ್ತದೆ. ಮುಂದೆ ಈ ಎರಡು ಪಂಥಗಳು ಶೈವಧರ್ಮ ಎಂಬ ಏಕೈಕ ನಾಮದ ಅಡಿಯಲ್ಲಿ ಬೆಳೆದು ಬಂದಿದೆ. ಆದರೆ ಕಾಲಾನಂತರದಲ್ಲಿ ತಾತ್ವಿಕ ಭಿನ್ನಾಭಿಪ್ರಾಯದಿಂದಲೂ ವೈಯಕ್ತಿಕ ನೆಲೆಯಲ್ಲಿಯೂ, ವೈಚಾರಿಕ ಬದಲಾವಣೆಯಿಂದಲೂ, ಈ ಶೈವ ಧರ್ಮವು ಹಲವು ಶಾಖೆಗಳಾಗಿ ಕವಲೊಡೆದು ನಿಂತಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಅಗಮಗಳು, ಪುರಾಣಗಳು, ಬ್ರಹ್ಮಸೂತ್ರ ಭಾಷ್ಯಗಳು ಹಾಗೂ ಇತರ ಕೃತಿಗಳು, ಶಾಸನಗಳು, ವಿದ್ವಾಂಸರ ಹೇಳಿಕೆಗಳು ವಿಭಿನ್ನವಾಗಿ ಉಲ್ಲೇಖಿಸುತ್ತವೆ.

- **ಆಗಮಗಳಲ್ಲಿ ಪ್ರಭೇದಗಳು**

ಶೈವಧರ್ಮಕ್ಕೆ ಆಗಮಗಳು, ಉಪನಿಷತ್ತುಗಳು ಮತ್ತು ಪುರಾಣಗಳು ಎಂಬ ಮೂರು ಬಗೆಯ ಸಾಹಿತ್ಯ ಪ್ರಕಾರಗಳು ಆಧಾರವಾಗಿವೆ. ಪುರಾಣಗಳಲ್ಲಿ ವಾಯುಪುರಾಣ, ಕೂರ್ಮಪುರಾಣ, ಲಿಂಗಪುರಾಣ ಮತ್ತು ಶಿವಪುರಾಣಗಳು ಶಿವಪರವಾದ ಪುರಾಣಗಳಾಗಿವೆ. ಶಿವನನ್ನು ಆರಾಧ್ಯ ದೈವವಾಗಿ ಭಾವಿಸುವ ಆಗಮಗಳು, ಶೈವಾಗಮಗಳು ದೇವನಾಗಿ ಎನಿಸಿದ್ದು ನಿತ್ಯಸತ್ಯವೆಂಬ ನಂಬಿಕೆ ಇದೆ.

ಆಗಮಗಳು, ತಂತ್ರಗಳು ಶೈವಮತದ ತತ್ವವನ್ನು ಖಚಿತವಾಗಿ ತಿಳಿಸಿವೆ. ಆಗಮ ಸಾಹಿತ್ಯದಲ್ಲಿ ಶೈವಾಗಮಗಳು ಸಮುದಾಯ ಪ್ರಧಾನವಾದ ವಿಭಾಗ ಅದು ಶೈವ ದರ್ಶನಗಳಿಗೆ ಮೂಲ ಆಕರ. ಆಗಮವೆಂದರೆ, ಪಾರಂಪರಿಕವಾಗಿ ಮತ್ತು ಪರಿಷ್ಕೃತವಾಗಿ ಬಂದ ಜ್ಞಾನ ಅಂತಹ ಜ್ಞಾನವನ್ನು ಒಳಗೊಂಡಿರುವ ಗ್ರಂಥಗಳು ಆಗಮವೆಂದು ಹೆಸರು. ಶೈವಾಗಮಗಳು ಪ್ರಧಾನವಾಗಿ ೨೮ ಇವೆ.ಇವುಗಳಿಗೆ ಹೊಂದಿಕೊಂಡಂತೆ ಉಪಾಗಮಗಳು ಇವೆ. ಉದಾಹರಣೆಗೆ, ಪರಮೇಶ್ವರಾಗಮದಲ್ಲಿ ವೀರಶೈವ, ಅನಾಧಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ ಎಂಬ ಸಪ್ತವಿಧಿ ಶೈವಗಳೆಂದು ವಿವರಿಸಿವೆ.

ಶೈವ, ಪಾಶುಪತ, ಕಾಪಾಲ, ಕಾಳಾಮುಖ ಇವು ನಾಲ್ಕು ಬಗೆಯ ಶೈವಾಗಮಗಳೆಂದು ಒಂದೆಡೆ ವ್ಯಕ್ತವಾಗಿದ್ದರೆ ಇನ್ನೊಂದು ಕಡೆಗೆ ಶೈವ, ಪಾಶುಪತ, ಸೋಮ ಲಾಕುಳಗಳ ಉಲ್ಲೇಖ ಬರುತ್ತದೆ. ಕೆಲವರು ಪಾಶುಪತ, ಕಾಳಾಮುಖ, ಮಹೇಶ್ವರ ಎಂಬ ನಾಲ್ಕು ಶೈವಭೇದಗಳನ್ನು ಹೇಳುತ್ತಾರೆ.

ಕಾಪಾಲಿಕ ಅಥವಾ ಕಾಪಾಲವೇ ಸೋಮವೆಂದು ಕೆಲವರ ವಾದವಾಗಿದೆ. ಪಾಶುಪತವನ್ನು ಮಹೇಶ್ವರನೆಂದು ಹೇಳಿದ್ದಾರೆ. ಹೀಗೆ ಶೈವ, ಪಾಶುಪತ (ಮಹೇಶ್ವರ) ಸೋಮ (ಕಾಪಾಲಿಕ) ಕಾಳಾಮುಖ (ಲಾಕುಳ) ಇವು ನಾಲ್ಕು ಮುಖ್ಯ ಶೈವಭೇದಗಳೆಂದು ಆಗಮಗಳ ಮೂಲಕ ತಿಳಿದುಬರುತ್ತದೆ.

- **ಪುರಾಣಗಳಲ್ಲಿ ಶೈವ ಪ್ರಭೇದಗಳು**

ಪುರಾಣಗಳು ಭಾರತೀಯ ಸಂಸ್ಕೃತಿಯು ಮೂಲರೂಪಗಳಾಗಿ ಪುರಾಣಗಳಲ್ಲಿಯೂ ಶೈವ ಪ್ರಭೇದಗಳ ಉಲ್ಲೇಖ ಕಂಡುಬರುತ್ತದೆ. ಕೂರ್ವ ಪುರಾಣದಲ್ಲಿ ಕಾಪಾಲ, ಪಾಶುಪತ, ನಾಕುಲ ಅಥವಾ ಲಕುಲೀಶ, ಸೋಮ, ಲಾಕುರ ಅಥವಾ ಲಾಂಜನ ಅಥವಾ ವಾಕುಲ, ಲಾಂಗಡ ಅಥವಾ ಲಾಗುಡ ಎಂದು ಶೈವ ಪ್ರಭೇದಗಳನ್ನು ಹೇಳಿದೆ.

'ನಾರದೀಯ ಪುರಾಣದಲ್ಲಿ ಕಪಾಲ, ಮಹಾವ್ರತಧರ ಎಂಬ ಬಗೆಗಳಿವೆ ಎಂದು ಕೆ.ಕೆ. ಹಂಡಿಕಿಯವರು ಹೇಳುತ್ತಾರೆ.'[೬] ಪಾಶುಪತ ಸಿದ್ಧಾಂತಮಾರ್ಗ ಎಂದು ಉಲ್ಲೇಖವಿರುವುದು ತಿಳಿಯುತ್ತದೆ. ಶಿವಪುರಾಣದ ವಾಯುವೀಯು ಸಂಹಿತೆಯಲ್ಲಿ ಕಾಪಾಲ, ಲಾಕುಳ, ಪಾಶುಪತ ಸಿದ್ಧಾಂತ ಮಾರ್ಗ ಮಹಾವ್ರತಧರ ಎಂಬ ಬಗೆಗಳನ್ನು ವಿವರಿಸುತ್ತದೆ. ಸ್ಕಂದ ಪುರಾಣದಲ್ಲಿ ಬರುವ ಸೂತ್ರಸಂಹಿತೆಯಲ್ಲಿ ಕಾಪಾಲ, ಲಾಕುಳಗಳ ವಿವರಗಳಿದ್ದರೆ (ಸ್ವಯಂ ಭೂಪುರಾಣದಲ್ಲಿ) ಸೋಮ, ಪಾಶುಪತ ಶೈವ ಎಂಬ ಪ್ರಭೇಗಳು ಮತ್ತು ವಾಮನ ಪುರಾಣದಲ್ಲಿ ಕಾಪಾಲಿಕ, ಪಾಶುಪತ, ಕಾಲದಮನ, ಶೈವ, ಕಾಳಾಮುಖ ಮಹಾವ್ರತನ್ ಶೈವ ಮಹಾಪಾಶುಪತ ಎಂಬ ಎಂಟು ವಿಧಗಳಿರುವುದು ತಿಳಿದುಬರುತ್ತದೆ. ಇದನ್ನು ಡೆವಿಡ್ ಲಾರೆಂಜ್ನವರು ವಿವರಿಸಿದ್ದಾರೆ.[೭]

ವರಣ ಪುರಾಣದ ನಿರೂಪಣೆಗಳು ಎಲ್ಲದಕ್ಕೂ ಕುತೂಹಲಕಾರಿಯಾಗಿ ಹೀಗೆ ಹೇಳುತ್ತದೆ. ' ಬ್ರಹ್ಮನು ಶಿವನನ್ನು ಪೂಜಿಸಲೆಂದು ನಾಲ್ಕು ಸಂಪ್ರದಾಯಗಳನ್ನು ನಿರ್ಮಿಸಿ ಪ್ರತಿಯೊಂದಕ್ಕೆ ಒಂದೊಂದು ಶಾಸ್ತ್ರವನ್ನು ನೀಡಿದನು, ಈ ಸಂಪ್ರದಾಯಳೆಂದರೆ ಶೈವ, ಪಾಶುಪತ, ಕಾಲದಮನ, ಕಾಪಾಲಿಕ ಎಂದು ಬಿ.ವಿ. ಶಿರೂರರು ಹೇಳಿದ್ದಾರೆ. ಒಟ್ಟಾರೆಯಾಗಿ ಪುರಾಣದಲ್ಲಿ ಶೈವ ಧರ್ಮದ ಹಲವು ಪ್ರಭೇದಗಳು ಕಂಡುಬರುತ್ತವೆ.

- **ವಚನಕಾರರ ದೃಷ್ಟಿಯಲ್ಲಿ ಶೈವಧರ್ಮ**

ಕೆಲವು ವಚನಕಾರರು ಈ ಶೈವಪ್ರಭೇದಗಳನ್ನು ಕುರಿತು ಹೇಳಿದ್ದಾರೆ.

ಉದಾಹಾರಣೆಗೆ, ಅರಿವಿನ ಮಾರಿತಂದೆ ತನ್ನ ಎರಡುವಚನದಲ್ಲಿ ಇತರ ಶೈವರನ್ನು ನಿರಾಕರಿಸಿ ಹೀಗೆ ಹೇಳುತ್ತಾರೆ.

"ಯೋಗಿ, ಜೋಗಿ, ಶ್ರಾವಕ, ಸನ್ಯಾಸಿ, ಪಾಶುಪತಿ, ಕಾಳಾಮುಖ

ಆರು ಬೇಧಮೂರರಲ್ಲಿ ಅಡಗಿ ಎರಡು ಅಳಿವಿಂಗೆ ಒಳಗಾಗಿತ್ತು

ಒಂದು ನಿಂದು ಸಮಯ ರೂಪಗಿತ್ತು, ಸಮಯಕ್ಕೆ ಹೊರಗಾದುದು

ಸದಾಶಿವಮೂರ್ತಿ ಲಿಂಗಕ್ಕೆ ಶಕ್ತಿ ನಾಮವಿಲ್ಲ"[೮]

ಇಲ್ಲಿ ಆರು ಸಮಯಗಳು ಮೂರರಲ್ಲಿ ಅಡಗಿವೆ. ಎರಡು ನಾಶವಾಗಿವೆ, ಒಂದುಮಾತ್ರ ಸಮಯದ ರೂಪ ಪಡೆದಿದೆ ಅಂದರೆ ಅದು ಕೂಡ ಶಕ್ತಿ ನಾಮವಿಲ್ಲದಿದ್ದರಿಂದ ನಿಜವಾದ ಸಮಯದಿಂದ (ವೀರಶೈವ) ಹೊರತಾಗಿದೆ. ಎಂಬುದು ಈ ವಚನದ ಸ್ಥೂಲಾರ್ಥವಾಗಿದೆ. ಯೋಗಿ, ಜೋಗಿ, ಶ್ರಾವಕ, ಸನ್ಯಾಸಿ, ಪಾಶುಪತಿ, ಕಾಳಾಮುಖ, ಎಂಬ ಅಂಶವನ್ನು ಇಲ್ಲಿ ಕಲ್ಪಿಸಿದ್ದಾನೆ. ಇಲ್ಲಿ ಕಾಳಾಮುಖ ಮತ್ತು ಪಾಶುಪತಗಳೆರಡು ಭಿನ್ನವಾದ ಪಂಥಗಳೆನ್ನುವುದು ಸ್ಪಷ್ಟವಾಗುತ್ತದೆ.

**ಬಸವಣ್ಣನವರ ವಚನಗಳಲ್ಲಿ:**

"ಗುರುಲಿಂಗ ಜಂಗಮ ವೇಕವಾದುವೆ ಗುರುವಲ್ಲದೆ
ಪಿತ ಮಾತೆ ಸತಿಸುತ ಅತ್ತೆಮಾವ ಇದಲ್ಲದೆ.
ಯೋಗಿ ಜೋಗಿ ಶ್ರವಣ ಸನ್ಯಾಸಿ ಕಾಳಾಮುಖ ಪಾಶುಪತಿ ಎಂಬ ಷಡುದರುಶನ,
ಶೈವಕರ್ಮಿಗಳ ಗುರುವೆಂಬುದಕ್ಕೆ ನಾಚದವರನೆಂಬೆನಯ್ಯ
ಆ ಮಹಾ ಘನ ಗುರುವಿಂಗೆ ಇಂತಿವರನೆಲ್ಲರ ಸರಿಗಂಡದೆ,
ಒಂದೆ ಎಂದು ನುಡಿದೆಡೆ, ಅಘೋರ ನರಕ ತಪ್ಪಿದಯ್ಯ ಕೂಡಲಸಂಗಮದೇವಾ!!"[೯]

ಹೀಗೆ ಬಸವಣ್ಣನವರು ಆ ಕಾಲದಲ್ಲಿ ಇದ್ದ ಷಡ್ದರ್ಶನಗಳನ್ನು ಉಲ್ಲೇಖಿಸಿದ್ದಾರೆ ಇವಗಳಲ್ಲಿ ಕಾಳಾಮುಖವು ಒಂದಾಗಿದೆ.

**ಚನ್ನಬಸವಣ್ಣನವರ ವಚನದಲ್ಲಿ :**

"ಶೈವ ಸೈವರಗಾದ ಪಾಶುಪತಿ ಪಂಥವರಿಯ
ಕಾಳಾಮುಖ ಕಂಗೆಟ್ಟ, ಮಹಾವ್ರತಿ ಮದವೇರಿದ
ಸನ್ಯಾಸಿ ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ
ಈ ಆರು ಭಕ್ತಿ ಪಂಥಕ್ಕೆ ಸಲ್ಲವು ಕೇಳಿರಣ್ಣ"[೧೦]

ಇಲ್ಲಿ ಆತ ಮೇಲಿನ ಶೈವಮತಗಳಿಂದ ವೀರಶೈವ ಹೇಗೆ ಭಿನ್ನವೆಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಒಟ್ಟಾರೆಯಾಗಿ ವಚನಗಳಲ್ಲಿ ಶೈವಧರ್ಮದ ಕುರಿತು ಕೆಲವು ವಚನಕಾರರ ದೃಷ್ಟಿಕೋನದಲ್ಲಿ ನೋಡಿದ್ದೇವೆ.

**ಕವಿಗಳ ದೃಷ್ಟಿಯಲ್ಲಿ ಶೈವಧರ್ಮ:**

ಹಲವಾರು ಕವಿಗಳು ಶೈವಪ್ರಭೇಧಗಳನ್ನು ಪ್ರಸ್ತಾಪಿಸಿದ್ದಾರೆ. ಕವಿ ಬ್ರಹ್ಮಶಿವ ಮೂಲತಃ ಜೈನಧರ್ಮದವನಾಗಿದ್ದು, ಶೈವಧರ್ಮಕ್ಕೆ ಮತಾಂತರ ನಾಗುತ್ತಾನೆ. ಅನಂತರ ಶೈವ ಧರ್ಮದಲ್ಲಿರುವ ಗೊಂದಲಗಳಿಂದಾಗಿ ಪುನಃ ಜೈನಧರ್ಮವನ್ನು ಸ್ವೀಕರಿಸುತ್ತಾನೆ. ತಾನು ಶೈವಧರ್ಮದಿಂದ ಹೊರಗೆ ಬಂದು ಆ ಧರ್ಮವನ್ನು ಟೀಕಿಸಿ ಬರೆಯುತ್ತಾನೆ. ಆಗ ಕಾಳಾಮುಖ, ಪಾಶುಪಥ, ಕಾಪಾಲಿಕ, ಶೈವ ಎಂಬ ನಾಲಕ್ಕೂ ಒಂದಕ್ಕಿಂತ ಮತ್ತೊಂದು ಭಿನ್ನವಾದದ್ದು ಎಂದು ತಿಳಿಯಬಹುದು.

ಗಣರತ್ನ ಸೂರಿಯೂ 'ತರ್ಕರಹಸ್ಯ ದೀಪಿಕಾ' ಎಂಬ ವ್ಯಾಖ್ಯಾನದಲ್ಲಿ ಶೈವರನ್ನು ಕಾಳಾಮುಖ, ಪಾಶುಪಥ, ಶೈವ ಮತ್ತು ಮಹಾವ್ರತಧರ ಎಂದು ನಾಲಕ್ಕು ಭಾಗಗಳಾಗಿ ಮಾಡಿ ಅದರಲ್ಲಿ ಗೃಹಸ್ಥರು, ಬ್ರಹ್ಮಚಾರಿಗಳು ಎಂದು ಬಿ.ವಿ.ಶಿರೂರು ರವರು ಹೇಳಿದ್ದಾರೆ.

**ಶಾಸನಗಳ ಪ್ರಭೇಧಗಳಲ್ಲಿ ಶೈವಧರ್ಮ**

ಕ್ರಿ.ಶ ೭೦೦ರ ಕಿಗ್ಗ ಶಾಸನ ಶೈವಪಂಥದ ಪಾಶುಪಥ ಶೈವಶಾಖೆಯ ಪ್ರಾಚೀನ ಶಾಸನವಾಗಿದೆ.

"ಪಾತಕನಕ್ಕು, ಕೊಟ್ಟು ದರ ಜ್ಞ ಸ್ವಸ್ತಿ,ಪೂರ್ವ ಮರೀ
ಯಾದೆಯಾ ಕಮ್ಮಾರರ ಪಾಶುಪಥ ಮರಿಯಾ
ದೆಯ ಉಳ್ಳದಲ್ಲಿ ಎತ್ತಿ ಕೊಳ್ವೋನ್ವಞ್ಚಮ
ಹಪಾತಕನಕ್ಕೊಂ ಅಸ್ತೀ ಕೊಟ್ಟ ಗವ್ದಿಯುಮ
ರೆಯ ಮಾನಮೀವೋರ್" [೧೧]

ಕ್ರಿ.ಶ ೧೧೧೯ ರ ನೇಸರಗಿ ಮತ್ತು ಕ್ರಿ.ಶ ೧೧೪೮ ಶಿರಸಂಗಿ ಶಾಸನದಲ್ಲಿ ಕಂಡುಬರುವ ಕಂದ ಪದ್ಯದಲ್ಲಿ ನಾಲ್ಕು ಶೈವಗಳ ಉಲ್ಲೇಖವಿರುವ ಶಾಸನದ ಪದ್ಯವಾಗಿದೆ.

"ನೆಗರ್ದ ಮಹಾವ್ರತಿಗಳೊಳಂ
ನೆಗರ್ದ ಮಹಾ ಪಾಶುಸುಪಥದೊಳ್ ಸ್ತೋತ್ರೀಯದೊಳಂ
ನೆಗರ್ದ ದಗಣಿತ ಮೆನಲ್ಕೆ
ನೆಗರ್ದ ಕಾಳಾಮುಖ ಸುಧರ್ಮಂ ಪ್ರಮುಖಃ" [೧೨]

ಇಲ್ಲಿ ಮಹಾವ್ರತ, ಪಾಶುಪಥ, ಶ್ರೋತ್ರೀಯ ಕಾಳಾಮುಖವೆಂಬ ಶಾಖೆಗಳನ್ನು ಸೂಚಿಸಿದೆ ಇವುಗಳಲ್ಲಿ ಶ್ರೋತ್ರಿಯ ಹೆಚ್ಚು ವೇದ ನಿಷ್ಟವಾಗಿರಬಹುದು. ಮಹಾವ್ರತಿ (ಕಾಪಾಲಿ) ಪಾಶುಪಥ, ಸ್ತೋತ್ರಿ(ಶೈವ) ಕಾಳಾಮುಖ(ಲಾಕುಳ,ಲಕುಲೀಶ) ಎಂಬ ಮೇಲೆ ಉಲ್ಲೇಖಿಸಿದ ನಾಲ್ಕು ಶೈವಗಳನ್ನೆ ಪ್ರಸ್ತಾಪಿಸುತ್ತಾ ಇವುಗಳಲ್ಲಿ ಕಾಳಾಮುಖವು ಶ್ರೇಷ್ಠವೆಂದು ಹೇಳುತ್ತದೆ.

ಇವುಗಳನ್ನು ಸಮೀಕರಿಸಿದರೆ ಲಕುಲೀಶ (ಕಾಳಾಮುಖ,ಲಾಕುಳ) ಪಾಶುಪಥ, ಶೈವಸಿದ್ದಾಂತ, ಮಹೇಶ್ವರ(ಶ್ರೋತ್ರ) ಮಹಾವ್ರತಿ (ಕಾಪಾಲಿ) ಈ ನಾಲಕ್ಕೂ ಶೈವಧರ್ಮಗಳನ್ನೇ ಪ್ರಸ್ತಾಪಿಸುತ್ತಾ ಕರ್ನಾಟಕದಲ್ಲಿ ಶೈವಧರ್ಮವು ವ್ಯಾಪಕವಾಗಿ ಹರಡಿದ್ದರ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ.

ಶಿವನನ್ನು ಪ್ರಮುಖ ದೈವವನ್ನಾಗಿ ಇಟ್ಟುಕೊಂಡು ಆರಾಧನೆ ಮಾಡುವ ತನ್ಮೂಲಕ ಮುಕ್ತಿಯನ್ನು ಕಾಣುವ ಧರ್ಮವೆ ಶೈವಧರ್ಮವಾಗಿದೆ. ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನ ಹಾಗೂ ಪ್ರಸಿದ್ದ ಧರ್ಮಗಳಲ್ಲಿ ಒಂದಾದ ಶೈವಧರ್ಮವು ಅನೇಕ ಪಂಗಡಗಳನ್ನು ಒಂದಿದ್ದು ಅದರ ಉಲ್ಲೇಖ ಈ ರೀತಿ ಇದೆ.

"ಕಾಪಾಲಂ ಲಾಕುಲಂ ವಾಮಂ ಭೈರಮಂ ಪೂರ್ವಪಶ್ಚಿಮಂ!
ಪಂಚರಾತ್ರಂ ಪಾಶುಪತಂ ತಥಾನ್ಯಾಸಿ ಸಹಸ್ರಶಃ!!" [೧೩]

ಕರ್ನಾಟಕದಲ್ಲಿ ಜೈನಧರ್ಮವು ಅತ್ಯಂತ ಪ್ರಬಲವಾಗಿದ್ದ ಅವಧಿಯಲ್ಲಿಯೇ ಶೈವಧರ್ಮದ ಭದ್ರವಾದ ಬುನಾದಿ ಸ್ಥಾಪಿತವಾಯಿತು. ಕರ್ನಾಟಕದ ಶೈವ ಮತ್ತು ಜೈನರೊಡನೆ ಹೋರಾಟವನ್ನು ಅವರ ಅಸ್ಥಿತ್ವವನ್ನು ನಾಶಮಾಡಿದ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಕೊಡಲಾಗಿದೆ.

**೨.೨ ಲಕುಲೀಶ ಪಂಥ**

ಲಕುಲೀಶ ಪಾಶುಪಥವು ಶೈವಧರ್ಮದ ಒಳಪಂಥವಾಗಿದೆ ಸಂಸ್ಕೃತ ಶಿಷ್ಟ ಪರಂಪರೆಯಲ್ಲಿ 'ಲಾಕುಳ, ನಾಕುಳ, ಲಾಕುರ, ಲಗುಡ, ಲಾಂಗುಲ, ಲಾಂಜನ ಎಂಬ ಎರಡು ವಿವಿಧ ಪರಿಭಾಷೆಗಳಿವೆ. ಇವೆಲ್ಲವು ಲಾಕುಳ ಸಮಯವನ್ನು ಸೂಚಿಸುತ್ತವೆಂಬ ನಂಬಿಕೆ ಇದೆ. ಪಾಶುಪತ ಎನ್ನುವ ಶಬ್ದವನ್ನು ನಾವು ಮೊದಲಬಾರಿಗೆ ಮಹಾಭಾರತದ ಶಾಂತಿಪರ್ವದಲ್ಲಿ ನೋಡಬಹುದು. ಇಲ್ಲಿ ಶಿವನೇ ಪಾಶುಪತ ಅಂದರೆ ಪಶುಪತಿ ಎಂದು ಕರೆಯಲಾಗಿದೆ. ಪಾಶುಪತ ಪಂಥದ ಸ್ಥಾಪಕ 'ಲಕುಲೀಶ ಅಥವಾ ನಕುಲೀಶಾ ಭಟ್ಟಾರಕ' ಎಂದು ಪರಿಗಣಿಸಲಾಗಿದೆ. (ಇತ್ತೀಚೆಗೆ ಎಸ್.ವಿ.ಪಾಠಕರು, ಪಾಶುಪತದ ಸ್ಥಾಪಕ ಶ್ರೀಕಂಠನೆಂದು ಹೇಳುತ್ತಾರೆ. ಲಕುಲೀಶ ಶ್ರೀಕಂಠನ ಶಿಷ್ಯನೆಂದು ಅವರಿಬ್ಬರು ಸೇರಿ ಪಾಶುಪತ ಪಂಥವನ್ನು ಸ್ಥಾಪಿಸಿದರೆಂದು ತಿಳಿಸುತ್ತಾರೆ.)

ಪರಂಪರೆಯ ಅನುಸಾರ ಲಕುಲೀಶನು ಆತ್ರೇಯಸ ಗೋತ್ರದ ವಿಶ್ವರೂಪ ಮತು ಸುದರ್ಶನ ದೇವಿಯವರ ಮಗನಾಗಿ ಭೃಗುನಾಡಾದ ಎಲ್ಕಾ ಎಂಬ ಗ್ರಾಮದಲ್ಲಿ ಜನಿಸಿದ. ಇವನು ಕಯಾವರೋಹಣದಲ್ಲಿ ನೆಲಸಿದ. ಇದು ಗುಜರಾತಿನ ವಡೋದರ ಜಿಲ್ಲೆಯ ಕರವಣ ಗ್ರಾಮವಾಗಿದೆ. ಇಲ್ಲಿ ಅವನು ಪಾಶುಪತ ಸಿದ್ದಾಂತವನ್ನು ಬೋಧಿಸಿದನು. ಇವನು ಪಾಶುಪತ ಪಂಥದ ಸಿದ್ಧಾಂತವನ್ನು ಒಳಗೊಂಡ ಪಾಶುಪತ ಸೂತ್ರವನ್ನು ರಚಿಸಿದನೆಂದು ಹೇಳಬಹುದು. ಇದರ ಹಸ್ತಪ್ರತಿ ಮತ್ತು ಕೌಂಡಿನ್ಯ ರಚಿಸಿದ (ಕ್ರಿ.ಶ.೫೦೦) ಪ್ರಾಚೀನ ಭಾಷ್ಯವನ್ನು ೧೯೩೦ರಲ್ಲಿ ಪತ್ತೆಹಚ್ಚಲಾಯಿತು. ಲಕುಲೀಶ ವಿಗ್ರಹಗಳು ಗುಜರಾತಿನಿಂದ ಕರ್ನಾಟಕದವರೆಗು ದೊರೆಯುತ್ತವೆ.

ಲಕುಲೀಶನ ಕೈಯಲ್ಲಿ 'ಬಡಿಗೆ' (ದೊಣ್ಣೆ) ಇರುವುದಕ್ಕೆ ಅರ್ಥವೇನಾಗುವುದಿಲ್ಲ. ಅದು ಶಿಶ್ನವೇ ಇರಬೇಕು. ಶಿಶ್ನಕ್ಕೂ, ನೇಗಿಲಕ್ಕೂ ತಾತ್ವಿಕ ನೆಲೆಯಲ್ಲಿ ಗಂಟುಹಾಕಲಾಗುತ್ತದೆ. ನೇಗಿಲು (ಗಂಡು) ಭೂಮಿಯನ್ನು (ಹೆಣ್ಣು) ಊಳುವುದನ್ನು ಗಂಡು ಹೆಣ್ಣಿನ ಸಂಭೋಗದ ಸಂಕೇತವಾಗಿ ಅರ್ಥೈಸಲಾಗುತ್ತದೆ. ಲಕುಲೀಶನ ಪ್ರತಿಮೆಗಳಲ್ಲಿ ಆತ ಕೈಯಲ್ಲಿ ಹಿಡಿದಿರುವ ಬಡಿಗೆ ಕೆಲವುಕಡೆ ಶಿಶ್ನದಂತೆ ಇದೆ.

"ಸಿಂಧೂಕೊಳ್ಳದ ಪಶುಪತಿಯ ಮುದ್ರೆಯಲ್ಲಿ ನಿಗುರಿದ ಶಿಶ್ನದ ಸ್ಪಷ್ಟ ಚಿತ್ರಣವಿದ್ದರೆ, ಇಲ್ಲಿ (ಅಭಿನವ ಪಾಶುಪತದಲ್ಲಿ) ಅದು ಪ್ರತ್ಯೇಕ ವಸ್ತುವೆಂಬಂತೆ ಕಲ್ಪಿತವಾಗಿದೆ."[೧೪]

ಲಕುಲೀಶನ ಕಾಲದಲ್ಲಿ ಮತ್ತು ನಂತರದಲ್ಲಿ ಇಷ್ಟಲಿಂಗವಾಗುತ್ತಿದೆ ಎಂಬುದುನ್ನು ಕಾಣಬಹುದು. ೧೨ನೇ ಶತಮಾನದ ಚಳುವಳಿಯ ಕಾಲದಲ್ಲಿ ಅದು ತನ್ನ ಪರಾಕಾಷ್ಠೆದೆಸೆ ಕಂಡಿತು. ಇಲ್ಲ ಇದರ ಆಕಾರ ಹೇಗಿತ್ತೊ? ಇಗಂತು ಸ್ಥಾವರ ಲಿಂಗಕ್ಕಾರಕ್ಕೆ ತೀರಾ ಚಿಕ್ಕ ರೂಪದಲ್ಲಿದೆ. ನಂತರ

ಬದಲಾಗುತ್ತಿರರುವ ಕಾಲದಲ್ಲಿ ಇದರ ಆಕಾರ (ಲಿಂಗದ ಆಕಾರ) ಕರ್ನಾಕದಲ್ಲಿ ವಿಶೇಷವಾಗಿ ವೀರಶೈವದಲ್ಲಿ ತನ್ನ ಸಂಪೂರ್ಣ ರೂಪ ಕಂಡಿತು. 'ಯೋಗ' ಇಲ್ಲಿ ಮುಂದೆ ಶಿವಯೋಗವಾಯಿತೆಂದು ಹೇಳಬಹುದಾಗಿದೆ.

ತನ್ನ ಗುಪ್ತಾಂಗವನ್ನೆ ತನ್ನ ಕೈಗೆ'ಇಷ್ಟಲಿಂಗ' ರೂಪದಲ್ಲಿ ತಂದುಕೊಂಡು ' ಶಿವಯೋಗ' ಸಾಧನೆಯ ಮೂಲಕ ಬಯಲನ್ನು ಗಳಿಸಬೇಕು. ಆದರೆ ಗುಪ್ತಾಂಗವೆಂಬ ಅಶ್ಲೀಲಾರ್ಥ ಆಗಲೇ ಮಾಯವಾಗುತ್ತಿತ್ತು. ಸ್ಥಾವರ ಲಿಂಗದ ಸ್ಥಾನದಲ್ಲಿ ಅದು ದೇಹದ ಮೇಲೆ ಅವತರಿಸುವ ಕಲ್ಪನೆಯಾಗಿ ಪ್ರವೇಶಿಸುತ್ತಿತ್ತು. ಅದಕ್ಕೆ ತಾತ್ವಿಕವಷ್ಟೇ ಅಲ್ಲ ಅದಕ್ಕಿಂತ ಮುಖ್ಯವಾಗಿ ಸಾಮಾಜಿಕ, ಆರ್ಥಿಕ ಒತ್ತಡವಿತ್ತು. ಮೊದಮೊದಲು ವಚನಕಾರರು ಸ್ಥಾವರ ಮತ್ತು ಇಷ್ಟಲಿಂಗಳ ಕುರಿತು ಗೊಂದಲದಲ್ಲಿರುವುದು ಸ್ಪಷ್ಟವಿದೆ. ನಂತರ ಬಸವಾದಿ ಶರಣರು ಒಂದು ಖಚಿತ ನೆಲೆಗೆ ಬಂದು ನಿಂತರು. ಸ್ಥಾವರ ಲಿಂಗವೆ ಅವರ ಅಂಕಿತವಾಗಿದ್ದರು ಈಗ ಅದು ಇಷ್ಟಲಿಂಗ ಎಂಬ ಅರ್ಥವನ್ನು ಪಡೆಯಿತು.

ಈ ಲಕುಲೀಶ ಪಾಶುಪತರ ಗುರು ಪರಂಪರೆಯನ್ನು ಕುರಿತು ಹೇಳುವ ಪ್ರಾಚೀನ ಆಕಾರ "ಇಮ್ಮಡಿ ಚಂದ್ರಗುಪ್ತನ ಮಥುರಾ ಶಾಸನವಾಗಿದೆ".[೧೫] ಈ ಶಾಸನವು ಚರಿತ್ರೆ ದೃಷ್ಟಿಯಿಂದ ಮಹತ್ವದಾಗಿದೆ. ಕ್ರಿ.ಶ. ೭೦೦ರ ಕಿಗ್ಗಲಾ ಶಾಸನದಲ್ಲಿ ಪಾಶುಪತದ ಉಲ್ಲೇಖ ಬಂದಿದೆ.[೧೬] ಚಿಂತ್ರ ಪ್ರಶಸ್ತಿಯು ಈ ಪಾಶುಪತದ ಬಗ್ಗೆ ವಿವರಿಸುತ್ತದೆ. ಗುಜರಾತಿನ ಕಾರ್ವ್ವಾನ್‌ನಲ್ಲಿ ನ(ಲ) ಲಕುಲೀಶ ಜನಿಸಿದ ಎಂದು ಹಾಗೂ ಅಲ್ಲಿ ಈಗ ನಕಲೇಶ್ವರ ದೇವಾಲಯವಿದೆ. ಎಂಬ ಪ್ರತೀತಿಯೂ ಇದೆ. ಎರಡು ಲಿಂಗಗಳಲ್ಲಿ ಲಕುಲೀಶನ ಮೂರ್ತಿಯನ್ನು ಕೆತ್ತಲಾಗಿದೆ.[೧೭]

ಚೀನಾದೇಶದಲ್ಲಿ ಪಾಶುಪತದ ಉಲ್ಲೇಖವು ಕಂಡುಬರುತ್ತದೆ. ಹಾಗೂ ಈ ಪ್ರದೇಶದಲ್ಲಿ ಮಹೇಶ್ವರನ ದೇವಾಲಯಗಳೇಂದು ಚಿದಾನಂದ ಮೂರ್ತಿಯವರು ಹೇಳಿದ್ದಾರೆ. ಪಾಶುಪತ ಪಂಥ ಗುಜರಾತಿನಿಂದ ಉತ್ತರ ಭಾರತಕ್ಕೆ ಹರಡಿತು. ಎಲ್ಲೋರವು ಪಾಶುಪತರ ನೆಲೆಯಾಗಿತ್ತು. ಪಟ್ಟದಕಲ್ಲಿನ ೭೫೫ರ ಶಾಸನವು ಜ್ಞಾನ ಶಿವವೆಂಬ ಪಾಶುಪತ ಆಚಾರ್ಯ ಗಂಗಾನದಿಯ ದಂಡೆಯಿಂದ ಬಂದನೆಂದು ತಿಳಿಸುತ್ತದೆ. ಪಟ್ಟದ ಕಲ್ಲಿನ ವೀರೂಪಾಕ್ಷ ಮತ್ತು ಮಲ್ಲಿಕಾರ್ಜುನ ಗುಡಿಗಳು ಬಾದಾಮಿಯ ಭೂತನಾಥ ಮತ್ತು ಮಹಾಕೂಟೇಶ್ವರ ದೇವಾಲಯಗಳಲ್ಲಿ ಲಕುಲೀಶನ ವಿಗ್ರಹಗಳನ್ನು ನಿರ್ಮಿಸಲಾಗಿದೆ. ಇವೆಲ್ಲವೂ ಪಾಶುಪತದ ಕೇಂದ್ರಗಲಾಗಿದ್ದವು. ಬಳ್ಳಿಗಾವಿ, ಸೂಡಿ, ಶ್ರೀಶೈಲಂ ಇವೂ ಸಹ ಪಶುಪತದ ನೆಲೆಯಾಗಿವೆ.

ಪಾಶುಪತವು ಕರ್ನಾಟಕದಲ್ಲಿ ಕ್ರಿ.ಶ. ೭ ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಪ್ರಚಲಿತದಲ್ಲಿತ್ತು. ಪಾಶುಪತ ಮತ್ತು ಕಳಮುಖ ಪಂಥಗಳ ನಡುವೆ ಸಾಕಷ್ಟು ಹೋಲಿಕೆಗಳು ಕಂಡುಬರುತ್ತವೆ ಬಹುತೇಕ ಈ ಪಾಶುಪತ ಶೈವ ಪಂಥವು ವಿಜಯನಗರ ಕಾಲದಲ್ಲಿ ಕಣ್ಮರೇಯಾಯಿತು. ಆದರೆ ನಂತರ ಕಾಲದಲ್ಲಿ ಈ ಪಾಶುಪತ ಪಂಥವು ಇದರ ಜೊತೆಯಲ್ಲಿಯೆ ಹುಟ್ಟಿಕೊಂಡ ವೀರಶೈವ

ಧರ್ಮದೊಂದಿಗೆ ಸೇರಿಕೊಂಡು ಬೆಳೆಯಲಾರಂಭಿಸಿತು. ನಂತರ ಇದು ಬೆಳೆದು ಅನೇಕ ಜನಪರ ಪಂಥವಾಗಿ ಪ್ರಖ್ಯಾತಿಯನ್ನು ಪಡೆಯಿತೆಂದು ಹೇಳಬಹುದಾಗಿದೆ.

**೨.೩. ಕಾಳಾಮುಖ ಪಂಥ**

ಮಧ್ಯಯುಗದಲ್ಲಿ ಪ್ರಭಾವಶಾಲಿಯಾಗಿದ್ದ ಶೈವ ಧರ್ಮದಲ್ಲಿ ಕಾಳಾಮುಖ ಪಂಥವು ವಿಶೇಷವಾದದ್ದು. ಈ ಪಂಥವು ಕಾಳಾಮುಖ ಲಕುಲೀಶನ ಮೂರನೆ ತಲೆಮಾರಾದ ಕೌರುಷ ಅಥವಾ ಕಾಲಾನನನಿಂದ ಬಂದವರೆಂಬ ಒಂದು ಅಭಿಪ್ರಾಯವಾಗಿದೆ. ಕಾಳಾಮುಖ ಪಂಥವು ಕ್ರಿ.ಶ. ೧೦ನೇ ಶತಮಾನದಲ್ಲಿ ಕಂಡುಬರುತ್ತದೆ. ಕರ್ನಾಟಕದ ಹಲವು ಭಾಗಗಳಲ್ಲಿ ಈ ಪಂಥವನ್ನು ಕಾಣಬವುಹುದು. ಪಾಶುಪಥದ ಪಂಥವೆ ಕರ್ನಾಟಕದಲ್ಲಿ ಕಾಳಾಮುಖವಾಗಿ ಮುಂದುವರೆಯಿತು. ದಕ್ಷಿಣ ಭಾರತದಲ್ಲಿ ನ್ಯಾಯ ವೈಶಿಷ್ಟಕರೇ ಕಾಳಾಮುಖವಾಗಿ ರೂಪಗೊಂಡಿರಬಹುದೆಂದು ಭಾವಿಸಬಹುದಾಗಿದೆ. ಕಾಳಾಮುಖದ ದಾರ್ಶನಿಕತೆ ನ್ಯಾಯ ವೈಶೇಷಕರದಲ್ಲಿದೆ. ಕಾಳಾಮುಖರೆಂದರೆ 'ಕಪ್ಪು' ಮಸಿಯನ್ನು ಮುಖಕ್ಕೆ ಬಳಿದುಕೊಂಡು 'ಕರಿಯ ಮುಖ' ಹೊಂದಿದವರು. ಈ ಕಾಳಾಮುಖ ವಿಷಯವನ್ನು ಕುರಿತು ಪಂಪಮಹಾತ್ವೆಯಲ್ಲಿ ಉಲ್ಲೇಖಿಸಲಾಗಿದೆ. ಹೆಸರೆ ಹೇಳುವಂತೆ ಪಂಪಾ ಮಹಾತ್ಮೆಯು ಕರ್ನಾಟಕದ ಪವಿತ್ರ ಯಾತ್ರಾಕೇಂದ್ರವು, ತೀರ್ಥ ಕ್ಷೇತ್ರವೂ ಆದ ಪಂಪಾ ಅಥವಾ ಹಂಪೆಯ ಪೌರಾಣಿಕ ಕತೆಯನ್ನು ಒಳಗೊಂಡಿದೆ.

ಕಾಳಾಮುಖ ಪದ್ದತಿಯಲ್ಲಿ ವಿಶಿಷ್ಟವಾದ ಪೂಜಾ ಪದ್ದತಿಯನ್ನು ಇದು ವಿವರಿಸುತ್ತದೆ. 'ಪಂಚವರಣ ಪೂಜಾಪದ್ದತಿ'ಯನ್ನು ಕಾಣಬಹುದು. ಪಂಪಾ ಮಹಾತ್ಮೇಯ ಪ್ರಕಟಿತ ಮತ್ತು ಅಪ್ರಕಟಿತ ಪತ್ರೈಗಳೆರಡರಲ್ಲೂ ಕಾಳಾಮುಖ ಸಿದ್ದಾಂತವು ಭೂಮಿಯ ಮೇಲೆ ಶಿವ ಆರಾಧಕರಿಗೆ ಹೇಗೆ ದೊರೆಯಿತೆಂಬ ಕುರಿತು ಕಥೆಯೊಂದನ್ನು ಹೇಳಿದೆ. ಒಮ್ಮೆ ಶಿವನು ಒಡ್ಡೋಲಗದಲ್ಲಿ ಕುಳಿತಿರುವಾಗ ಅರಣ್ಯ ದೇವತೆಯಾದ ಸವಿತಾ ಪ್ರವೇಶಿಸಿ ಕಲ್ಪವೃಕ್ಷದ ಫಲವೊಂದನ್ನು ಶಿವನಿಗೆ ಸಮರ್ಪಿಸಿದಳು. ಭಗವಂತ ಅದನ್ನು ಪಾರ್ವತಿಗೆ ನೀಡಿದನು. ಅಲ್ಲಿದ್ದ ಗಣೇಶ ಮತ್ತು ಷಣ್ಮೂಖರು ಅದನ್ನು ಪಡೆಯಲು ಬಯಸಿದರೂ, ಪಾರ್ವತಿಯೂ ವಿನೋದಕ್ಕಾಗಿ ಪೃಥ್ವಿಯ ಪ್ರದಕ್ಷಣೆಯನ್ನು ಹಾಕಿ ಮೊದಲುಬಂದ ಜಯಶಾಲಿಯೂ ಫಲವನ್ನು ಪಡೆಯುವನೆಂದು ತಿಳಿಸಿದಳು. ಷಣ್ಮುಖ ತಕ್ಷಣ ತನ್ನವಾಹನವಾದ ನವಿಲಿನ ಮೇಲೆ ಪೃಥ್ವಿಯ ಪ್ರದರ್ಶನಕ್ಕೆ ಆಶಿರ್ವಧಿಸಿ ಹೊರಟನು. ಆದರೆ ಗಣೇಶ ತನ್ನ ಮಾತಾ ಪಿತೃಗಳ ಪ್ರದಕ್ಷಣೆ ಹಾಕಿದ "ಪೃಥ್ವಿಯು ಸೃಷ್ಠಿಗೊಳ್ಳುವ ಆರಂಭದಲ್ಲಿ ತಾವಿಬ್ಬರೇ ಇದ್ದಿರೆಂದು ತಮ್ಮಲ್ಲಿಯೇ ಈ ಪೃಥ್ವಿ ಅಡಗಿದೆಯೆಂದು ಹೇಳಿದಾ" ಅಷ್ಟರಲ್ಲಿ ಷಣ್ಮುಖನು ಆಗಮಿಸಿದ. ಶಿವ ಪಾರ್ವತಿಯರು ಷಣ್ಮುಖನ ಪ್ರಯತ್ನ-ಪರಿಶ್ರಮ ಮತ್ತು ಗಣೇಶನ ಬುದ್ದಿವಂತಿಕೆಯನ್ನು ಮೆಚ್ಚಿ ಫಲವನ್ನು ಇಬ್ಭಾಗ ಮಾಡಿ ಇಬ್ಬರಿಗೂ ಹಂಚಿಕೊಟ್ಟರು.

ಇದೇ ಸಂದರ್ಭದಲ್ಲಿ ಷಣ್ಮುಖನ ಅನುಚರನನಾದ ಮಹಾಕಾಲನು ಭೂ ಪ್ರದಕ್ಷೀಣೆ ಮಾಡುತ್ತಾ ಷಣ್ಮುಖ ತಲುಪಿದ ಬಹು ಹೊತ್ತಿನ ನಂತರ ಬಂದು ತಲುಪಿದ. ಮಹಾಕಾಲನೂ ಒಡೆಯನ ಮೇಲಿಟ್ಟ

ಭಕ್ತಿಯನ್ನು ಕಂಡು ಸುಪ್ರೀತನಾದ ಶಿವ ಆತನನ್ನು ಆಶಿರ್ವಧಿಸಿದ. ಹೀಗೆ ಶಿವನ ಗಣೇಶ್ವರಲ್ಲಿ ಆತನೂ ಒಬ್ಬರಾದನೂ. ಒಂದು ದಿನ ಷಣ್ಮುಖ ಅವನಿಗೆ ಕಾಳಾಮುಖ ಮಹಾ ಮಂತ್ರದ ರಹಸ್ಯವನ್ನು ಶ್ರುತಪಡಿಸಿದ. ಮಹಾಕಾಲ ಅದನ್ನು ಇತರೆ ದೇವತೆಗಳು ಯಕ್ಷಾ ಗಂಧರ್ವರು, ಮುನಿಗಳು, ತಪಸ್ವೀಗಳಿಗೆ ತಿಳಿಸಿದ. ಈ ತಪಶ್ವಿಗಳು ಭೂಮಿಯಲ್ಲಿರುವ ತಮ್ಮ ಶಿಷ್ಯಂದಿರ ಮೂಲಕ ಇದನ್ನು ಜನರಿಗೆ ತಿಳಿಸಿದರು. ಹೀಗೆ ಕಾಳಾಮುಖ ಮಹಾಮಂತ್ರವು ಭೂಮಿಗಿಳಿದು ಬಂದಿತು. ಕಾಳಾಮುಖ ಯತಿಗಳ ಹೆಸರುಗಳು ರಾಶಿ, ಶಕ್ತಿ, ಭಟ್ಟಾರಕ, ದೇವ, ಜೀಯ, ಪಂಡಿತ ಯತಿಗಳು ಇದ್ದರು ಎಂದು ತಿಳಿಯಬಹುದು. [೧೮]

ಕಾಳಾಮುಖರು ಧಾರ್ಮಿಕ ಆಚರಣೆಗಳಲ್ಲಿ ಪಾಶುಪತ, ನಕುಲೀಶ ಪಂಥಗಳಿಂದ ಭಿನ್ನರಾಗಿರುವರು. ಇವರು ಆಚರಣೆ ವಿಧಿಗಳಲ್ಲಿ ಷಣ್ಮುದ್ರೆಗಳನ್ನು ಅನುಸರಿಸುತ್ತಿದ್ದರು.[೧೯]

- ಕಪಾಲದಲ್ಲಿ ಆಹಾರ ಸ್ವೀಕರಿಸುವುದು
- ದಹಿಸಿದ ವ್ಯಕ್ತಿಗಳ ಬೂದಿಯಿಂದ ಮೈಯನ್ನು ಸವರಿಕೊಳ್ಳುವುದು
- ಶವ ಮಾಂಸ ಭಕ್ಷಣೆ
- ದಂಡವನ್ನು ಹಿಡಿದುಕೊಳ್ಳುವುದು
- ಹೆಂಡವನ್ನು ಕುಡಿವುದು
- ಸ್ತ್ರೀ ಪೂಜೆ ಮತ್ತು ಮುಕ್ತ ಲೈಂಗಿಕತೆ

ಇವುಗಳನ್ನು ಅನುಸರಿಸುವದರಿಂದ ಯಾವುದೆ ಜಾತಿಯವನು ಬ್ರಾಹ್ಮಣನಾಗುವನೆಂಬ ನಂಬಿಕೆ ಇವರಲ್ಲಿತ್ತು ಎಂದು ಹೇಳಬುದಾಗಿದೆ.

ಕಾಳಾಮುಖರಿಗೂ ಮತ್ತು ಪಾಶುಪತರಿಗೂ ಧರ್ಮಾಚರಣೆಯಲ್ಲಿ ವ್ಯತ್ಯಾಸವನ್ನು ಕಾಣಬಹುದು. ಪಾಶುಪತರು ಬೂದಿಯನ್ನು ಮೈಯಿಗೆ ಲೇಪಿಸಿಕೊಂಡಿರುತ್ತಾರೆ. ಆದರೆ ಕಾಳಾಮುಖರು ಸ್ಮಶಾನದಲ್ಲಿ ಶವವನ್ನು ದಹಿಸಿದ ಬೂದಿಯನ್ನು ಮೈಯಿಗೆ ಲೇಪಿಸಿಕೊಳ್ಳುತ್ತಾರೆ.

ಇಬ್ಬರು ಬೂದಿಯನ್ನು ಪವಿತ್ರವೆಂದು ಹೇಳುತ್ತಾರೆ. ಕಾಳಾಮುಖ ಮತ್ತು ಪಾಶುಪತರು ಜಟಾಧಾರಿಗಳಾಗಿರುತ್ತಿದ್ದರು. "ರಾಮಾನುಜರ ಪ್ರಕಾರ ಕಾಳಾಮುಖರು ಬಲವಾದ ದಂಡವನ್ನು ಹಿಡಿದಿರುತ್ತಾರೆ. ಪಾಶುಪತದ ಆಚಾರ್ಯನಾದ ಲಕುಲೀಶನು ಟ್ವಾಂಗವನ್ನು ಹಿಡಿದಿರುವುದನ್ನು ಗಮನಿಸಬುಹುದೆಂದು ಹೇಳುತ್ತಾರೆ". ಕಾಳಾಮುಖ ದೇವಾಲಯಗಳು ಮತ್ತು ಮಠಗಳಿಗೆ ನೀಡಿದ ದತ್ತಿಯ ಸಂಗತಿಗಳು ಶಾಸನಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆಯತ್ತವೆ. ಇದು ಶೈವದ ಪಂಥವಾಗಿರುವುದರಿಂದ ಇವರಲ್ಲಿ ದೇವಾಲಯದ ಪರಿಕಲ್ಪನೆಯಿತ್ತು. ಅವು ಹೆಚ್ಚಾಗಿ ತ್ರೈಪುರುಷ ಅಂದರೆ ಬ್ರಹ್ಮ ಅಥವಾ ಸೂರ್ಯ, ಮಹೇಶ್ವರರ ಮತ್ತು ವಿಷ್ಣು ಇವರುಗಳನ್ನು ಒಳಗೊಂಡಿರುವ ದೇವಾಲಯಗಳನ್ನು ಕಾಣಬಹುದಾಗಿದೆ. ಅಲ್ಲದೆ ಇವರಲ್ಲಿ ಪ್ರಮುಖವಾಗಿ 'ಮೂರು ಕೋಣೆಯ ಸಂತತಿ'

ಎಂಬ ವಿಶೇಷ ಉಲ್ಲೇಖ ಅನೇಕ ಶಾಸನಗಳಲ್ಲಿದ್ದು, ಬಹುಶಃ ಇದು ತ್ರೈಪುರುಷರನ್ನು ಒಳಗೊಂಡ ತ್ರಿಕೂಟ ಮಾದರಿಯ ದೇವಾಲಯವನ್ನು ಪ್ರತಿನಿಧಿಸುತ್ತದೆ. ಇಂತಹ ಹಲವು ದೇವಾಲಯಗಳು ಪ್ರಮುಖ ಶಾಖೆಯಾಗಿದ್ದವು ಎಂದು ಹೇಳಬಹುದು.

ಕಾಳಾಮುಖ ಪಂಥದಲ್ಲಿ ಪ್ರಮುಖವಾಗಿ ಎರಡು ಶಾಖೆಗಳು ಕಂಡುಬರುತ್ತವೆ. ಶಕ್ತಿ ಪರಿಷತ್ತು ಮತ್ತು ಸಿಂಹ ಪರಿಷತ್ತು.

**೧. ಶಕ್ತಿ ಪರಿಷತ್ತು**

ಈ ಶಕ್ತಿಪರಿಷತ್ತು ಶಾಖೆಯು ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ ಹಾಗೂ ಆಧ್ರಪ್ರದೇಶದಲ್ಲಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಪ್ರಮುಖವಾಗಿ ಧಾರವಾಡ, ಶಿವಮೊಗ್ಗ ಜಿಲ್ಲೆಯಲ್ಲಿ ಇದರ ಶಾಖೆಗಳಿರುವುದನ್ನು ಗಮನಿಸಬಹುದು. ಶಕ್ತಿ ಪರಿಷತ್ತುನಲ್ಲಿ ಪರ್ವತಾವಳಿ ಮತ್ತು ಭುಜಂಗವಳಿ ಎಂಬ ಎರಡು ಪಂಗಡಗಳಿದ್ದವು.

ಶಕ್ತಿ ಪರಿಷತ್ತಿನ ಪ್ರಸಿದ್ಧವಾದ ದೇವಾಲಯ ಶಿವಮೊಗ್ಗಜಿಲ್ಲೆಯ ಬಳ್ಳಿಗಾವಿಯ ಕೇದಾರೇಶ್ವರ ದೇವಾಲಯ, ಈ ತೆರಾನಾದ ದೇವಾಲಯಗಳನ್ನು ಸಾಮಾನ್ಯವಾಗಿ ಕೋಡಿಮಠಗಳೆಂದು ಕರೆಯಲಾಗಿದೆ. ಇಲ್ಲಿ ಯತಿಗಳು ತಾವು ಶಕ್ತಿ ಪರ್ಷೆಯ ಪರ್ವತಾವಳಿಯ ಮೂವರ ಕೋಣೆಯ ಸಂತತಿಯವರು ಎಂದು ಹೇಳಿಕೊಳ್ಳುತ್ತಾರೆ. ಈ ಪರಿಷತ್ತು ಅಥವಾ ಪರ್ಷಯು ಎಂಬುದು ಯತಿಗಳ ಗುಂಪನ್ನು ಸೂಚಿಸುತ್ತದೆ. ಅಲ್ಲದೆ ಅವರ ಸಂತತಿಯನ್ನು ತಿಳಿಸುತ್ತದೆ. ಇಲ್ಲಿನ ಗುರು ಪರಂಪರೆ ಪರ್ವತಾವಳಿಯಲ್ಲಿ ಜನಸಿದ ಕೇದಾರಶಕ್ತಿ ಪಂಡಿತನಿಂದ ಆರಂಭವಾಗುತ್ತದೆ. ಬಳ್ಳಿಗಾವಿಯ ಶಕ್ತಿಪರಿಷತ್ತಿನ ಕೇಂದ್ರದ ಪ್ರಭಾವ ಸುತ್ತಲಿನ ಐದು ಉಪಕೇಂದ್ರಗಳ ಮೇಲೆ ಪ್ರಸರಿಸಿತ್ತು ಎಂದು ಹೇಳಬಹುದು.

ಅಬ್ಬಲೂರಿನ ಬ್ರಹ್ಮೇಶ್ವರ ದೇಗುಲ, ಹಳೆನಿಡನೇಗಿಲದ ಮಲ್ಲಿಕಾರ್ಜುನ ದೇಗುಲ, ಗದುಗಿನ ತ್ರಿಕೂಟೇಶ್ವರ ದೇಗುಲ, ಸೂಡಿಯ ನಗರೇಶ್ವ ದೇವಾಲಯಗಳು ಶಕ್ತಿ ಪರಿಷತ್ತಿನ ಕೇಂದ್ರವಾಗಿದ್ದವು. ಅಲ್ಲದೆ ಆಂಧ್ರದ ಶ್ರೀ ಶೈಲ ಅಥವಾ ಶ್ರೀಪರ್ವತ ಸಹ ಇದರ ಕಾಳಾಮುಖರ ಕೇಂದ್ರವಾಗಿತ್ತು. ಇಲ್ಲಿ ಕಾಳಾಮುಖರ ಮಠಗಳು ವಿದ್ಯೆಯ ಪ್ರಸಾರವನ್ನು ಕೈಗೊಂಡಿದ್ದವು. ಬಳ್ಳಿಗಾವಿಯ ಕೇದಾರೇಶ್ವರ ದೇಗುಲ ಅಥವಾ ಕೋಡಿ ಮಠವು ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಈ ಕೋಡಿಮಠದಲ್ಲಿ ಸೋಮೇಶ್ವರ ಪಂಡಿತ, ಶ್ರೀಕಂಠ, ವಾಮಶಕ್ತಿ, ಗೌತಮ ಪಂಡಿತ, ಜ್ಞಾನಶಕ್ತಿ ಮುಂತಾದ ಯತಿಗಳು ಈ ಮಠದಲ್ಲಿದ್ದು ಜ್ಞಾನ ಪ್ರಸಾರವನ್ನು ಮಾಡುತ್ತಿದ್ದರೆಂದು ತಿಳಿಯಬಹುದು.[೨೦]

೨. ಸಿಂಹ ಪರಿಷತ್ತು

ಸಿಂಹ ಪರಿಷತ್ತು ಕೇಂದ್ರಗಳು ಕರ್ನಾಟಕ, ಆಂದ್ರಪ್ರದೇಶದಲ್ಲಿ ಕಂಡು ಬರುತ್ತವೆ. ಕರ್ನಾಟಕದಲ್ಲಿ ಬಳ್ಳಾರಿ ವಿಜಯಪುರ ಮತ್ತು ಕಲಬುರ್ಗಿ ಜಿಲ್ಲೆಯಲ್ಲಿ ದೊರೆಯುತ್ತವೆ. ಈ ಸಿಂಹ ಪರಿಷತ್ತಿನ ಪ್ರಭಾವವು ಶಕ್ತಿ ಪರಿಷತ್ತುಗಿಂತ ಕಡಿಮೆಇತ್ತು. ' ಸಿಂಹ ಪರ್ಷೆ' ಕಾಳಾಮುಕರದಲ್ಲ, ಲಾಕುಳೇಶ್ವರರಿಗೆ ಸೇರಿದ್ದು ಎಂದು ಆರ್.ಸಿ. ಹಿರೇಮಠರು ಹೇಳಿದ್ದಾರೆ.

ಮಲೆಯಾಳ ಪಂಡಿತ ಎಂಬ ಯತಿಯು ಸಿಂಹ ಪರಿಷತ್ತಿನ ಮಹತ್ವದ ವ್ಯಕ್ತಿ ಯಾಗಿದ್ದಾನೆ. ಕರ್ನಾಟಕದ ಶಾಸನಗಳಲ್ಲಿ ದೊರೆಯುವ ಯತಿ ಪರಂಪರೆಯೊಂದು ಇತನ ಹೆಸರಿನಿಂದ ಮುಂದುವರೆಯುತ್ತದೆ. ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಮಾಹಾಮಂಡಲೇಶ್ವರನಾದ ಗಂಗರಸನು ಹಲಗುಂದಿಯ ದೇವಾಲಯಕ್ಕೆ ಭೂದಾನವನ್ನು ನೀಡಿದ್ದ, ಇದನ್ನು ಕೊಟ್ಟಿದ್ದು ಗುರು ಕಳೇಶ್ವರನ ಸಮ್ಮುಖದಲ್ಲಿ. ಇವನ ಗುರುಪರಂಪರೆ ಆರಂಭವಾಗುವುದು ಮಲೆಯಾಳ ಪಂಡಿತನಿಂದ.[೨೧] ಇಂತಹ ಅನೇಕ ಉದಾಹರಣೆಗಳು ಶಾಸನಗಳಿಂದ ದೊರೆಯುತ್ತವೆ.

ಕಾಳಾಮುಖ ಗುರುಗಳು 'ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ' ಇತ್ಯಾದಿಗಳಲ್ಲಿ ನಿರತರಾಗಿದ್ದರೆಂದು ಶಾಸನಗಳು ತಿಳಿಸುತ್ತವೆ. ಕಳೇಶ್ವರ ತೇಜೂರಾಶಿ, ತ್ರೈಲೋಕ್ಯ ಕರ್ತಾರ ಪಂಡಿತ, ಗಂಗರಾಶಿ, ಸೂರೇಶ್ವರ ಪಂಡಿತ, ತ್ರೀಲೋಚನ ಮುನಿ, ಸೋಮೇಶ್ವರ ಪಂಡಿತ, ತ್ರಿಭುವನ ಶಕ್ತಿ ಪಂಡಿತ, ಮಲೆಯಾಳ ಪಂಡಿತ ಸೂರ್ಯರಾಶಿ ಪಂಡಿತ, ರುದ್ರಶಕ್ತಿ ಪಂಡಿತ, ಶಿವಶಕ್ತಿ ಪಂಡಿತ ಮುಂತಾದ ಕಾಳಾಮುಖ ಆಚಾರ್ಯರ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ.[೨೨]

ಕಾಳಾಮುಖ ಕೇಂದ್ರಗಳು ಹಾಸನ ಜಿಲ್ಲೆಯ ಹಳೇಬೀಡು, ಅರಸಿಕೇರೆ, ಕಣಕಟ್ಟೆ, ಚಿತ್ರದುರ್ಗ ಜಿಲ್ಲೆಯ ಅಸಗೋಡು ಮತ್ತು ಚದರಗೋಳ ಚಿಕ್ಕಮಂಗಳೂರು ಜಿಲ್ಲೇಯ ಬಾಣೂರು. ಕೋಲಾರ ಜಿಲ್ಲೆಯ ನಂದಿ, ತುಮಕೂರು ಜಿಲೆಯ ಕರದಾಳು ಮುಂತಾದ ಸ್ಥಳಗಳಲ್ಲಿ ಕಾಳಾಮುಖರ ಪ್ರಮುಖ ಕೇಂದ್ರಗಳನ್ನು ಕಾಣಬಹುದು.

ಕಾಳಾಮುಖರು ೧೨ನೇ ಶತಮಾನದವರೆಗೂ ಜೈನರೊಂದಿಗೆ ಸ್ಪರ್ಧೆಗಿಳಿದು ತಮ್ಮ ಅಸ್ಥಿತ್ವವನ್ನು ಕಾಪಾಡಿಕೊಂಡರು. ಮುಂದೆ ಅವರು ವೀರಶೈವ ಧರ್ಮದೊಂದಿಗೆ ಸ್ಪರ್ಧೆ ನಡೆಸಿರಬಹುದು. ಅದರಬಗ್ಗೆ ಅಷ್ಟಾಗಿ ತಿಳಿದುಬರುವುದಿಲ್ಲ, ಆದರೂ ವೀರಶೈವಧರ್ಮದೊಂದಿಗೆ ಅನುಕೂಲಕರವಾಗಿ ನೆಡೆದುಕೊಂಡಿರಬಹುದು. ವೀರಶೈವ ಚಳುವಳಿಯ ನಂತರವು ಕಾಳಾಮುಖರ ಅಸ್ಥಿತ್ವ ಯಥಾಸ್ಥಿತಿ ಮುಂದುವರೆಸಿದ್ದರಲ್ಲಿ ಯಾವುದೇ ಅನುಮಾನ ಕಾಣುವುದಿಲ್ಲ. ಕಾಳಾಮುಖರು ದಿನಕಳೆಂದಂತೆ ಹೆಚ್ಚಿನ ಪ್ರಮಾಣದಲ್ಲಿ ಲೀನವಾಗಿರಬಹುದು.

## ೧೨ ನೇ ಶತಮಾನದ ರಾಜಕೀಯ ಹಿನ್ನೆಲೆ.

ಕಲ್ಯಾಣ ಚಾಲುಕ್ಯರ ಮತ್ತು ಅವರ ಸಾಮಂತರಾಗಿದ್ದುಕೊಂಡು ಮುಂದೆ ಅಲ್ಪಕಾಲ ಚಕ್ರವರ್ತಿಯಾಗಿ ಮೆರೆದ ಕಲಚೂರಿಗಳ, ಹೊಯ್ಸಳರ ಕಾಲದ ರಾಜಕೀಯ, ಧಾರ್ಮಿಕ ಅಂಶಗಳನ್ನು ನಾವು ಗುರುತಿಸಬಹುದಾಗಿದೆ.

ಕಲ್ಯಾಣ ಚಾಲುಕ್ಯ ರಾಜ್ಯವನ್ನು ತೈಲಪನು(ಕ್ರಿ.ಶ. ೯೭೩-೯೯೭) ಸ್ಥಾಪಿಸಿದ ಮೇಲೆ ಅದು ಕ್ರಿ.ಶ. ೧೦೭೭ರಲ್ಲಿ ಅಧಿಕಾರಕ್ಕೆ ಬಂದ ಆರನೆಯ ವಿಕ್ರಮಾದಿತ್ಯನಕಾಲದಲ್ಲಿ ಅಭ್ಯದಯ ಸ್ಥಿತಿಯನ್ನು ಪಡೆಯಿತಾದರೂ ವಿಕ್ರಮಾದಿತ್ಯನ ಮರಣದನಂತರ ಸಾಮ್ರಾಜ್ಯದ ಅವನತಿಯ ಕುರುಹುಗಳು ಕಾಣಿಸಿಕೋಳ್ಳತೊಡಗುತ್ತವೆ. ಮುಮ್ಮಡಿ ಸೋಮೇಶ್ವರನು (ಕ್ರಿ.ಶ. ೧೧೭೩-೩೯) ತನ್ನ ತಂದೆಯ ಮರಣಾನಂತರ ಪಟ್ಟವನ್ನೇರಿದರೂ ರಾಜಕೀಯದಲ್ಲಿ ನಿರಾಸಕ್ತನಾಗಿದ್ದು ತನ್ನ ಜೀವಿತದ ಕಾಲವನ್ನು ಜ್ಞಾನಾರ್ಜನೆಯ ಉದ್ದೇಶಕ್ಕೆ ವಿನಿಯೋಗಿಸಿದಂತಿದೆ. ಇದರಿಂದ ಆರನೆ ವಿಕ್ರಮಾದಿತ್ಯನ ಕಾಲಾದಲ್ಲಿಯೇ ಸ್ವತಂತ್ರರಾಗಲು ಹವಣಿಸುತ್ತಿದ್ದ. ಹೊಯ್ಸಳರಿಗೆ ಸುಗಮವಾದ ಅವಕಾಶ ಸಿಗುತ್ತದೆ.

ಮೂರನೇ ಸೋಮೇಶ್ವರನ ಮಗ ಜಗದೇಕಮಲ್ಲನು (ಕ್ರಿ.ಶ. ೧೧೩೯-೪೯) ಪಟ್ಟಕ್ಕೆ ಬಂದಾಗ ಹೊಯ್ಸಳರ ಜೊತೆಗೆ ಕಲಚೂರಿಗಳು ಸ್ವತಂತ್ರರಾಗಲು ಹವಣಿಸುತ್ತಾರೆ. ವಿಕ್ರಮಾದಿತ್ಯನ ಸಾವಿನ ನಂತರ ಆರಂಭವಾದ ಚಾಲುಕ್ಯರ ರಾಜ್ಯದ ಅವನತಿಯು ಪರಕೀಯರೊಡನೆ ನಡೆಸಿದ ಹೋರಟ ಸಾಮಂತರ ಸ್ವತಂತ್ರ ಹೋರಾಟ ಇವುಗಳ ಮೂಲಕ ಅಧಿಕವಾಗುತ್ತ ನಡೆದು ಮೂರನೇ ತೈಲಪನ ಕಾಲದಲ್ಲಿ ಪೂರ್ವವಾಗಿ ಅಪ್ಪುತ್ತದೆ. ಇದೇ ಸಮಯದಲ್ಲಿ ಕಲಚುರಿಗಳು ರಾಜಕೀಯ ಪ್ರಾಮುಖ್ಯತೆಯನ್ನು ಗಳಿಸಿಕೊಂಡರು. ಕಲ್ಯಾಣದ ಸಾಮ್ರಾಟರಾದರು ಆದರೂ ಅವರು ಅಧಿಕಾರದಲ್ಲಿದ್ದುದ್ದು ಕೇವಲ ಎರಡು ದಶಕಗಳಷ್ಟೆ ಕಲಚೂರಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದು ಬಸವೇಶ್ವರರು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನು ಮಾಡಿದ್ದರಿಂದ ಇವರ ಕಾಲ ತನ್ನದೇ ವೈಶಿಷ್ಟವನ್ನು ಪಡೆದುಕೊಂಡಿದೆ.

"ಕಲಚುರಿಗಳನ್ನು ಶಾಸನಗಳಲ್ಲಿ ಕಾಲಮಜರ ಪುರವರಾಧೀಶ್ವರ"[೨೩] ರೆಂದು ವರ್ಣಿಸಲಾಗಿದೆ. ಎರಡನೇ ಬಿಜ್ಜಳನು ಕ್ರಿ.ಶ. ೧೧೩೦ರ ಸುಮಾರಿಗೆ ಅಧಿಕಾರಕ್ಕೆ ಬಂದ ಚಾಲುಕ್ಯರ ಎರಡನೇ ಜಗದೇಕ ಮಲ್ಲ ಕ್ರಿ.ಶ. ೧೧೩೯ರಲ್ಲಿ ಪಟ್ಟಭಿಷಕ್ತನಾದ. ಸ್ವತಂತ್ರನಾಗಬೇಕೆಂಬ ತಂದೆಯ ಉದ್ದೇಶವನ್ನು ಬಿಜ್ಜಳ ಚೆನ್ನಾಗಿ ಅರಿತಿದ್ದ. ಅಂತಹ ಅವಕಾಶ ಒದಗಿ ಬಂದರೆ ಅದನ್ನು ಉಪಯೋಗಿಸಿಕೊಳ್ಳಲು ಸಮಯವನ್ನು ನಿರೀಕ್ಷಿಸುತ್ತಿದ್ದ. "ಕ್ರಿ.ಶ. ೧೧೪೭ ಮುತ್ತಗಿ ಶಾಸನ ಅವನನ್ನು " ಮಹಾಮಂಡಲೇಶ್ವರ ಕುಮಾರ ಬಿಜ್ಜಳೇಶ್ವರ[೨೪] ಎಂದು ಕರೆದಿದೆ.

ತನ್ನ ಸಾಮ್ರಾಜ್ಯದಮೇಲೆ ಹಂತ ಹಂತವಾಗಿ ಬಿಜ್ಜಳ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡನು. ನಂತರ ಚಾಲುಕ್ಯ ರಾಜ್ಯವನ್ನು ಅಕ್ರಮಣ ಮಾಡಿಕೊಂಡು, ಕಲ್ಯಾಣವನ್ನು ತನ್ನ ರಾಜ್ಯಧಾನಿಯಾಗಿ ಮಾಡಿಕೊಂಡನು.

ಇವನು ಅನೇಕ ಬಿರುದುಗಳನ್ನು ಹೊಂದಿದ್ದನು "ಭುವನೈಕವೀರ, ಭುಜಬಲ ಭೀಮ, ಭುವನೈಕ ಮಲ್ಲ, ಭುಜಭಲ ಚಕ್ರವರ್ತಿ"[೨೫] ಮುಂತಾದ ಬಿರುದುಗಳ್ನು ಹೊಂದಿದ್ದನು.

ಅಧಿಕಾರದ ಅಪಾಹರಣದಿಂದ ದೊರೆತ ಸಿಂಹಾಸನ ಬಿಜ್ಜಳನ ಪಾಲಿಗೆ ಆನಂದದಾಯಕವಾಗಿರಲ್ಲಿಲ್ಲ. ಮುಂದೆ ಕೇವಲ ಆರು ವರ್ಷಗಳು ಮಾತ್ರ ಬದುಕಿದ್ದನು. ಚಾಲುಕ್ಯ ವಂಶಸ್ಥರು ರಾಜ್ಯವನ್ನು ಮರಳಿ ಪಡೆಯಲು ಹಲವಾರು ರೀತಿಯಲ್ಲಿ ಪ್ರಯತ್ನಿಸಿದರು.

ಇವನ ಕಾಲದಲ್ಲಿ ಅಂದರೆ ೧೨ನೇ ಶತಮಾನದಲ್ಲಿ ವೀರಶೈವಧರ್ಮ ಹೆಚ್ಚು ಪ್ರಚಲಿತದಲ್ಲಿ ಇತ್ತು. ಬಿಜ್ಜಳನ ಆಕ್ರಮಣ ನೀತಿಯ ಬಗೆಗೆ ಕಲ್ಯಾಣ ಚಾಲುಕ್ಯರ ನಿಷ್ಠಾವಂತ ಸಾಮಂತರಲ್ಲಿ ಮತ್ತು ಪ್ರಜೆಗಳಲ್ಲಿ ಅಸೂಯೆ ಮತ್ತು ಕೀಳಿರಿಮೆ ಉಂಟಾಗಿದ್ದಿತು.

ಬಿಜ್ಜಳನು ತಾನು ಚಕ್ರವರ್ತಿಯಾದ ಮೇಲೆ ಪ್ರಜೆಗಳಿಂದ ಮತ್ತು ಸಾಮಂತರಿಂದ ಒಳ್ಳೇಯ ಅಭಿಪ್ರಾಯಗಳನ್ನು ಗಳಿಸಿಕೊಂಡಿದ್ದನು. "ತಾನು ಎಸಗಿದ ಪಾಪಕಾರ್ಯದ ಬಗೆಗಿನ ಅಳಕನ್ನು ಹೋಗಲಾಡಿಸಿಕೊಳ್ಳಲು ಶೈವರ ಗುಡಿಗೋಪುರ ನಿರ್ಮಿಸಿದ್ದಲ್ಲದೆ. ಶಿಥಿಲಗೊಂಡಿದ್ದ ಶಿವದೇವಾಲಯಗಳನ್ನು ಜೀರ್ಣೋಧ್ಧಾರಗೋಳಿಸಲು ದತ್ತಿಯನ್ನು ನೀಡಿದನು"[೨೬]

"ಸ್ವತಃ ದೊರೆಯೇ ಬಳ್ಳಿಗಾವಿಯ ಕೋಡಿಮಠಕ್ಕೆ ಹೋಗಿ ಅಲ್ಲಿನ ಚಟುವಟಿಕೆಯನ್ನು ವೀಕ್ಷಿಸಿ ದತ್ತಿ ಬಿಟ್ಟಿದ್ದು 'ಕೋಡಿಮಠದ ಶಾಸನದಿಂದ ತಿಳಿದುಬರುತ್ತದೆ."[೨೭]

ಬಿಜ್ಜಳನ ಕಾಲದಲ್ಲಿ ಪ್ರಸಿದ್ದ ವಿಭೂತಿ ಪುರುಷನಾದ ಬಸವೇಶ್ವರರು ಶೈವಧರ್ಮ ಅಥವಾ ವೀರಶೈವ ಧರ್ಮದ ಕ್ರಾಂತಿಯನ್ನು ಮಾಡಿದರು. ಸಾಮಾಜಿಕ ಮತ್ತು ಧಾರ್ಮಿಕವಾಗಿ ಉನ್ನತ ಮತ್ತು ಕೆಳವರ್ಗಗಳ ನಡುವೆ ಸಾಮ್ಯತೆಯನ್ನು ಸಾಧಿಸಲು ಹೊರಾಡಿದರು. ಇದರಿಂದ ವೀರಶೈವರ ಆಕ್ರೋಶಕ್ಕೆ ಬಿಜ್ಜಳ ಗುರಿಯಾದುದರಿಂದ ಅಧಿಕಾರ ಮತ್ತಷ್ಟು ಮುಳ್ಳಿನ ಹಾಸಿಗೆಯಾಯಿತು. ಎಂದು ಹೇಳಬಹುದು.

"ಚಾಣಕ್ಷ ದಂಡಾಧಿಪತಿಯಾದ ಕಸಪಯ್ಯ ನಾಯಕನ ನೆರವಿನಿಂದ ಬಿಜ್ಜಳ ಹೇಗೋ ಆಡಳಿತ ನಡೆಸಿಕೊಂಡು ಹೋದನು". ಇವರ ಕಾಲದ ರಾಜಕೀಯ ಪರಿಸ್ಥಿತಿಯನ್ನು ಕುರಿತು ಒಂದು ಮಾತಿನಲ್ಲಿ ಹೇಳುವುದಾದರೆ ರಾಜಕೀಯ ಜೀವನ ರಾಜಮನೆತನಗಳ ಪರಸ್ಪರ ಕಚ್ಚಾಟದ ಕಥೆಯಾಗಿತ್ತು ಎಂದೆನಿಸುತ್ತದೆ.

ಕರ್ನಾಟಕದ ಪ್ರಮುಖ ಧಾರ್ಮಿಕ ಪಂಥ ವೀರಶೈವಧರ್ಮವಾಗಿದೆ. ಇದನ್ನು ಲಿಂಗಾಯತ ಧರ್ಮ ಎಂದೂ ಕರೆಯುತ್ತಾರೆ. ಈ ಪಂಥೀಯರು "ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಮತ್ತು ಸ್ವಲ್ಪ ಪ್ರಮಾಣದಲ್ಲಿ ಕೇರಳದಲ್ಲಿ ಇದ್ದಾರೆ. ಇದನ್ನು ರೇವಣಸಿದ್ದ, ಮರುಳಸಿದ್ದ ಪಂಡಿತರಾಧ್ಯ, ಏಕೋರಾಮ ಮತ್ತು ವಿಶ್ವರಾಧ್ಯರೆಂಬ ಐದು ಮಂದಿ ಆರ್ಯರು ಸ್ಥಾಪಿಸಿದರೆಂದು ಹೇಳಲಾಗುತ್ತದೆ."

ಇವರು ಸ್ಥಾಪಿಸಿದ ಮಠಗಳು ಬಾಳೆಹೊನ್ನುರು, ಉಜ್ಜಯಿನಿ, ಶ್ರೀಶೈಲ, ಹಿಮತ್ಕೇದಾರ ಮತ್ತು ಕಾಶೀ ಕ್ಷೇತ್ರಗಳಲ್ಲಿವೆ. ಈ ವ್ಯಕ್ತಿಗಳು ಕ್ರಿ.ಶ. ೧೧ನೇ ಶತಮಾನದಲ್ಲಿ ಬದುಕಿರಬಹುದೆಂದು ಊಹಿಸಬಹುದಾಗಿದೆ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ರವರ ಅಭಿಪ್ರಾಯದ ಪ್ರಕಾರ, ವೀರಶೈವದ

ಸ್ಥಾಪಕ ಏಕಾಂತರಾಮಯ್ಯ ಎಂದು ಹೇಳುತ್ತಾರೆ. "ಏಕೋರಾಮರಾಧ್ಯ ಇವರು ಸುಧಾಕುಂಡದ ಮಲ್ಲಿಕಾರ್ಜುನ ಲಿಂಗದಿಂದ ಉದ್ಭವಿಸಿದರೆಂದು ಶಂಕುವರ್ಣರೇ ಏಕೋರಾಮರಾಧ್ಯರಾಗಿ ಅವತರಿಸಿದರೆಂದು ನಂಬಲಾಗುತ್ತದೆ. ಇವರು ಶ್ರೀಶೈಲದಲ್ಲಿ ವೀರಶೈವ ಪೀಠವನ್ನು ಸ್ಥಾಪಿಸಿದರು. ಸುಮಾರು ಹನ್ನೇರಡನೇಯ ಶತಮಾನದ ಆರಂಭದಲ್ಲಿ ಇದ್ದಿರಬಹುದೆಂದು ಶ್ರೀಪತಿ ಪಂಡಿತ ತನ್ನ ಕೃತಿಯಲ್ಲಿ ಏಕೋರಾಮಚಾರ್ಯರನ್ನು ಪ್ರಾರ್ಥಿಸಿ ಅವರು 'ಬ್ರಹ್ಮಸೂತ್ರ'ಕ್ಕೆ ಟೀಕೆಯೊಂದನ್ನು ಬರೆದಂತೆ ಹೇಳಿದ್ದಾರೆ. ಅಬಲೂರು ಶಾಸನದಲ್ಲಿ ಬರುವ ಏಕಾಂತ ರಾಮಯ್ಯ ಹಾಗೂ ಏಕೋರಾಮಾರಾಧ್ಯ ಇಬ್ಬರು ಒಂದೇ ಎಂದು ತಪ್ಪಾಗಿ ಇವರು ಭಾವಿಸಿದ್ದಾರೆ." ೨೮

ಏಕಾಂತರಾಮಯ್ಯ ಬಸವನ ಹಿರಿಯ ಸಮಕಾಲೀನವನೆಂಬ ತಿಳುವಳಿಕೆ ವೀರಶೈವರಲ್ಲಿದ್ದು, ಇವನು ವೀರಶೈವ ಧರ್ಮದ ಸ್ಥಾಪಕನೆಂದುತಿಳಿಯಲು ಯಾವುದೇ ಆಧಾರಗಳು ಲಭ್ಯವಿಲ್ಲವೆಂದು ಹೇಳಬಹುದು.

**೨.೪ ಏಕಾಂತ ರಾಮಯ್ಯನ ಹುಟ್ಟು ಮತ್ತು ಬೆಳವಣಿಗೆ:**

ಕನ್ನಡದಲ್ಲಿ ಅವತರಿಸಿದ ಹಲವಾರು ಪುಣ್ಯ ಪುರುಷರ ಸಾಧನೆ ಮತ್ತು ಅವರ ಪವಾಡವನ್ನು ನಾವು ಕೇಳಿದ್ದೇವೆ. ಇದೇ ರೀತಿಯಲ್ಲಿ ನಾವು ಶೈವಧರ್ಮದಲ್ಲಿ ಬರುವ ಏಕಾಂತ ರಾಮಯ್ಯನ ಒಂದು ಹುಟ್ಟು ಕೂಡ ಹಲವಾರು ಪವಾಡ ಮತ್ತು ಶೈವರ ಒಂದು ಉಳಿವಿಗೋಸ್ಕರ ಜನಿಸಿದವನಾಗಿದ್ದಾನೆ. ಇವರ ಹುಟ್ಟನ್ನು ತಿಳಿಯಲು, ನಾವು ಮೂರು ಜಾವಿ ದೇವರ ಚರಿತ್ರೆಯನ್ನು ಗಮನಿಸಿದರೆ ಏಕಾಂತ ರಾಮಯ್ಯ ಜನಿಸಿದ ಹಿನ್ನೇಲೆಯ ಬಗ್ಗೆ ತಿಳಿಯುತ್ತದೆ. ಶಾಂತ ನಿರಂಜನರ ವಿರಚಿತ ಅಬ್ಬಲೂರ ಚರಿತೆ ಶಾಸನವನ್ನು ಗಮನಿಸಬಹುದು. ಏಕಾಂತ ರಾಮಯ್ಯನು ಕಾಳಾಮುಖ ಶೈವ ಪರಂಪರೆಗೆ ಸೇರಿದವನು. ಪ್ರಾಚೀನ ಕಾಳಮುಖ ಯತಿಗಳಿಗೆ 'ಏಕಾಂತ ನಿವಾಸ' ಎಂಬ ವಿಶೇಷಣವು ಇರುವುದನ್ನು ಆಂದ್ರ ಪ್ರದೇಶದ ಆಲಂಪುರ, ಶ್ರೀಶ್ರೈಲ ಮುಂತಾದ ಶಾಸನಗಳಿಂದ ತಿಳಿಯುತ್ತದೆ.

ಏಕಾಂತ ರಾಮಯ್ಯನು ಜೈನರ ವಿರುದ್ದ ಹೋರಾಡಿ ಶಿವಪಾರಮ್ಯವನ್ನು ಘೋಷಿಸಿದ ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯ ಕ್ರಿ.ಶ. ೧೧೪೪ರ ವರೆಗೂ ಮೂವರ ಕೋಣೆಯ ಸಂತತಿಯ ಕಾಳಮುಖ ಗುರುಗಳ ಆಳ್ವಿಕೆಗೆ ಒಳಪಟ್ಟಿತ್ತು. ಎಂಬುದನ್ನು ಅಬ್ಬಲೂರು ಶಾಸನ ತಿಳಿಯುತ್ತದೆ. ಅಬ್ಬಲೂರು ಕಾಳಮುಖರ ಪ್ರಸಿದ್ಧ ಕೇಂದ್ರವಾಗಿದ್ದು ಬಳ್ಳಿಗಾವಿಯ ಪರಿಸರದಲ್ಲಿಯೇ ಇರುವುದರಿಂದ ಏಕಾಂತ ರಾಮಯ್ಯನು ಕಾಳಮುಖ ಶೈವ ಮತಕ್ಕೆ ಸೇರಿದವನೆಂಬುದು ಸ್ಪಷ್ಟವಾಗುತ್ತದೆ. ಏಕಾಂತ ರಾಮಯ್ಯನು ಪವಾಡ ಪುರುಷನಾಗಿ ೧೧ ನೇ ಶತಮಾನದಲ್ಲಿ ಜನಿಸಿದವನೆಂದು ಶಾಸನದಿಂದ ತಿಳಿದುಬರುತ್ತದೆ.

ಅಬ್ಬಲೂರ ಚರಿತೆಯ ಕಥಾನಾಯಕ ಏಕಾಂತರಾಮಯ್ಯನನ್ನು ಕುರಿತು ರಚಿತವಾದ ಉಪಲಬ್ದ ಕೃತಿಗಳಲ್ಲಿ ಹರಿಹರನ ಏಕಾಂತರಾಮಿ ತಂದೆಗಳ ರಗಳೆಯೆ! ಮೊದಲನೆಯದಾಗಿದೆ. ಏಕಾಂತ ರಾಮಯ್ಯನಿಗೆ ಸಂಬಂದಿಸಿದ ಅಬ್ಬಲೂರು ಶಾಸನವು ಇದರ ಕಾಲ ಖಚಿತವಾಗಿ ತಿಳಿದುಬಂದಿಲ್ಲ.

ಹರಿಹರನ ಕಾಲಕ್ಕೆ ಹತ್ತಿರವಾಗಿದೆ. ಏಕಾಂತ ರಾಮಯ್ಯನ ಕಥೆ ಕೆಲವರು ಕಾವ್ಯ ಪುರಾಣಗಳಲ್ಲಿ ಸಿಗುತ್ತದೆ. ಆದರೆ ಆತನ ಮೇಲೆ ಸಮಗ್ರವಾಗಿ ಒಂದು ಕೃತಿ ರಚಿತವಾಗಿರುವುದನ್ನು ಹರಿಹರನನ್ನು ಬಿಟ್ಟರೆ ಶಾಂತ ನಿರಂಜನಿಂದಲೇ, ಕ್ರಿ.ಶ. ೧೬೭೨ ರಲ್ಲಿದ್ದ ಶಾಂತಲಿಂಗ ದೇಶಕನ ಬೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಬಹುಶ: ಕಡೆಯದಾಗಿ ಏಕಾಂತರಾಮಯ್ಯನ ಕಥೆ ಬರುತ್ತದೆ. ಪ್ರಾಚೀನ ಕಾವ್ಯ ಪುರಾಣಗಳಲ್ಲಿ ಪ್ರಾಸಂಗಿಕವಾಗಿ ಬರುವ ಏಕಾಂತರಾಮಯ್ಯನ ಕಥೆಯನ್ನು ಪರಿಶೀಲಿಸಿ ಶಾಂತನಿರಂಜನ ತನ್ನ ಅಬ್ಬಲೂರು ಚರಿತೆಯನ್ನು ಬರೆದಿರಬಹುದೇ? ಎಂದು ಎಲ್. ಬಸವರಾಜ ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಈ ಕಾವ್ಯವು ಸಾಂಗತ್ಯದಲ್ಲಿ ರಚಿತವಾಗಿರುವುದರಿಂದ ಸಾಂಗತ್ಯ ಕೃತಿಗಳು ಹೆಚ್ಚು ಪ್ರಚುರವಾಗಿದ್ದು ಹದಿನೇಳನೆಯ ಶತಮಾನದಲ್ಲಿ ಇದು ಹುಟ್ಟಿರಬೇಕೆಂದು ಊಹಿಸಬಹುದು. ಬೇರೆ ಆಧಾರಗಳು ಸಿಕ್ಕುವವರೆಗೂ ಈ ಕಾಲವನ್ನು ಕ್ರಿ ಶ. ೧೬೫೦ ಎಂದು ಬಾವಿಸಬಹುದಾಗಿದೆ.

ಶಾಂತನಿರಂಜನನು ವೀರಶೈವ ಕವಿ, "ಶಿವಭಕ್ತ ಗುರು ವಂಶೋದ್ಭವನಾದ ಚಿಕ್ಕೇಶತವೆ ರಾಜಿಸಿದ ಗುರುರಾಯ. ಗುರುಕಾಲವಂಶಾಬ್ದಿಚಂದ್ರಮ ಕುಂತು ಹರನ ಮತದವರ ಸಂತತಿಯನ್ನು ಕಾಯ್ದ ಚಿಕ್ಕೇಶ ಗುರುರಾಯ ಮುಂತೆಸೆದನು ಕೀರ್ತಿಯಾಂತ ಅಂತವರನ್ವಯ ಶಾಂತ ನಿರಂಜನ ಅಂತರವಳ್ಳಿ ನಿವಾಸಿ"[೨೯] ಎಂದು ಹೇಳಿಕೊಂಡಿರುವುದರಿಂದ ಈತನು ಗುರುಪರಂಪರೆಗೆ ಸೇರಿದವನೆಂದು ವ್ಯಕ್ತವಾಗುತ್ತದೆ. ಶಾಂತ ನಿರಂಜನ ಕಾಳಮುಖ ಪರಂಪರೆಗೆ ಸೇರಿದವನಾದರೂ ವೀರಶೈವ ಎಂದು ಹೇಳಿರುವುದನ್ನು ನಾವು ಗಮನಿಸಬೇಕು.

**ಏಕಾಂತ ರಾಮಯ್ಯನ ಜೀವನ ಚರಿತ್ರೆ; ಬೆಳವಣಿಗೆಯ ಘಟ್ಟಗಳು:**

**೧) ಜನ್ಮಸ್ಥಳ:**

ಏಕಾಂತರಾಮಯ್ಯನ ಜನ್ಮಸ್ಥಳ 'ಅಲಂದೆ' ಎಂಬುದು ಅಬ್ಬಲೂರ ಶಾಸನದ ಸಂಗಯಿನಿಪುದಳಂದೆ ಯೆಂಬುದು ನಗರಂ ಚೆಲುವೆಸದು ನಾಡೆ'ಎಂಬ ಹಾಗೂ ಅಬ್ಬಲೂರು ಚರಿತದ ಚಪ್ಪನ್ನ ದೇಶದೋಳುಳ್ಳ ಕರ್ನಾಟಕ ವೋಪ್ಪಿರೆ ವಾಯುವ್ಯ ದೆಸೆಯೋಳಿಪ್ಪುದು ಅಲದಿಯ ಪುರವೆಸೆದುದು" ಎಂಬ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ಹರಿಹರನ ರಗಳೆಯಲ್ಲಿ "ಇರಲಿತ್ತಲತ್ತ ಉತ್ತರ ದಿಶಾಬಾಗದೊಳ್ ಹರಭಕ್ತನೇಕಾಂತ ರಾಮಯ್ಯ ನೊಪ್ಪದೋಳ್" ಎಂದಿದೆ. ಅದು ಈಗಿನ ಗುಲಬುರ್ಗಾ ಜಿಲ್ಲೆಗೆ ಇಪ್ಪತ್ತ ಮೂರು ಮೈಲಿ ದೂರದಲ್ಲಿದೆ. ಇರುವ ಆಳಂದವೇ ಆಗಿದೆ. ಈಗಿನ ಆಳಂದೆ ಪ್ರಾಚೀನ ಕಾಲದಲ್ಲಿ ಕಲ್ಯಾಣದಷ್ಟೇ ಪ್ರಖ್ಯಾತಿಯನ್ನು ಪಡೆದಿತ್ತು. ಏಕಾಂತ ರಾಮಯ್ಯನು ಜೀವಿಸಿದ್ದ ಕಾಲಕ್ಕೆ ಸಾಂಸ್ಕೃತಿಕ ಕೇಂದ್ರವಾಗಿತ್ತು. ಜೈನಮತದ ಅವಶೇಷಗಳು ಹೇರಳವಾಗಿ ಕಂಡುಬರುತ್ತವೆ. ಆ ಕಾಲದಲ್ಲಿ ತರ್ದವಾಡಿ ನಾಡಿನಂತೆ ಅಲಂದೆಯ ಸಾವಿರ ಗ್ರಾಮವುಳ್ಳ ನಾಡಾಗಿ 'ಅಲಂದೆ ಸಾಸಿರ' ಎಂಬ ಪ್ರಖ್ಯಾತಿಯನ್ನು ಪಡೆದಿತ್ತು ಎಂಬುದು ಶಾಸನದಿಂದ ತಿಳಿದು ಬರುತ್ತದೆ. ಕಲಬುರ್ಗಿ ತಾಲ್ಲೂಕಿನ ನಿಂಬರಿಗೆಯ ಶಾಸನವು ಅಲಂದೆಯನ್ನು ಕುರಿತು, "ಅಲಂದೆ ನಾಡು ನಾಡುಗಳ ಅರಸು"[೨] ಎಂದು ಸುತ್ತಿಸಿದೆ. ಅಲಂದೆಯು ಅಬ್ಬಲೂರು ಶಾಸನ ಪ್ರಕಾರ. "ಅದು ನಾನಾವಿಧ ಗಂಧ ಶಾಳಿವನದಿಂ ಸಾರ್ವ್ವರ್ತುಕೋದ್ಯಾನನಂ

ದನದಿಂ ಪೂರ್ಣ ತಟಾಕ ಕೂಪ ಸರಸೀ ಸಂದೋಹದಿಂಸಾರಸೋನ್ಮದ ಭೃಂಗೀ ಪಿಕ ಕೋಕ ಕೇಳಿ ಶುಕ ಸಂಘನೀಕ ಗಣಿಕಾ ವಿನೋದ ಕೃತವೀಣಾ ನಾದದಿಂದೊಪ್ಪಗುಂ"[೩೦]

ಎಂದು ಅಳಂದೆಯನ್ನು ಕುರಿತು ಅಬ್ಬಲೂರು ಶಾಸನ ತಿಳಿಸುತ್ತದೆ. ಅಲ್ಲದೆ, ಅಳಂದೆಯಲ್ಲಿ ಸೋಮನಾಥ ದೇವಾಲಯವು ಇದ್ದಿತ್ತು ಎಂಬುದು ಅಳಂದೆಯ ಶಾಸನದಿಂದ ತಿಳಿಯುತ್ತದೆ.

"ಶ್ರೀಮತ ಕೈಳಾಸದಿನಖಿ

ಲಾಮರ ಮಣಿ ಮುಕುಟ ಘಟತ ಚರಣಾಂಭೋಜನಂ

ಸೋಮೇಶ್ವರ ನವತರಿಸಿದ

ನೀ ಮಹೀತಳ ಮೆನಿಪಲನ್ದಾ ಪುರದೊಳ"[೩೧]

ಎಂಬ ಉಲ್ಲೇಖ ಹಾಗೂ ಅಬ್ಬಲೂರ ಶಾಸನದಿಂದ ಅವತರಿಸಿರ್ದನಲ್ಲಿ ರಜತಾಳದಿಂ ಗಿರಿಜಾ ಸಮೇತಮುತ್ಯವದೊಳ್ ಸೋಮನಾಥನ್ ಎಂಬ ಹೇಳಿಕೆಗಳಿಂದ ತಿಳಿದುಬರುತ್ತದೆ.

ಈಗ ಅಲಂದೆಯಲ್ಲಿ ಸೋಮನಾಥ ದೇವಾಲಯ ಇರುವುದನ್ನು ಗಮನಿಸಬಹುದು. ಅಲಂದೆಯ ಪ್ರಮುಖ ದೇವತೆಯಾದ ಸೋಮೇಶ್ವರನ ಅನುಗ್ರಹದಿಂದಲೇ ರಾಮಯ್ಯನು ಜನಿಸಿದ್ದಾನೆ ಎಂಬುದು ಗಮನೀಯ. ಈತನ ಇಷ್ಟದೈವದ ಹಾಗೆ ಈತನೂ ಎಷ್ಟುಪ್ರಭಾವಶಾಲಿಯಾಗಿದ್ದ ಎಂಬ ವಿಚಾರ ಮುಂದಿನ ವಿವರಗಳಿಂದ ಗೊತ್ತಾಗುತ್ತದೆ. ಏಕಾಂತ ರಾಮಯ್ಯ ಜನ್ಮಸ್ಥಳವಾದ ಅಲಂದೆಯ ಅದಿದೈವ ಸೋಮನಾಥ, ಆತನು ಅನುಷ್ಠಾನವನ್ನು ಸಾಧಿಸಿ ಶಿವಪ್ರಸಾದರ ಸಾಫಲ್ಯವನ್ನು ಸಂಪಾದಿಸಿದ ಪವಿತ್ರ ಕ್ಷೇತ್ರವಾದ ಪುಲಿಗೇರಿಯ ಇಷ್ಟದೈವ ಸೋಮನಾಥ, ಆತನು ಅನುಷ್ಠಾನವನ್ನು ಸಾಧಿಸಿ ಶಿವಪ್ರಸಾದದ ಸಾಫಲ್ಯವನ್ನು ಸಂಪಾದಿದ ಪವಿತ್ರ ಕ್ಷೇತ್ರವಾದ ಪುರಿಗೇರಿಯ ಇಷ್ಟದೈವ ಸೋಮನಾಥ ತನ್ನ ಶೈವಸಿದ್ಧಿಯ ಕಾರ್ಯಕ್ಷೇತ್ರವಾದ ಅಬ್ಬಲೂರಿನಲ್ಲಿ ತನ್ನ ಮಾಹೇಶ್ವರ ನಿಷ್ಠೆಯ ಸ್ಮಾರಕವಾಗಿ ನಿರ್ಮಿಸಿದ ದೇವಾಲಯ ವೀರಸೋಮೇಶ್ವರ. ಇಂತಹ "ವೀರಸೋಮೇಶ್ವರ ನಿಷ್ಠೆಯ ವ್ಯಕ್ತಿಯನ್ನು ಪಡೆದ ಅಲಂದೆಯು ವೀರಶೈವರ ನೆಲೆವೀಡಾಗಿತ್ತು ಎಂಬಲ್ಲಿ ಯಾವುದೆ. ಸಂದೇಹವೇ ಇಲ್ಲವೆಂದು ವಿದ್ವಾಂಸರು ಹೇಳಿದ್ದಾರೆ."

ಏಕಾಂತ ರಾಮಯ್ಯನು ವೀರಶೈವ ಮತದ ಪ್ರತಿನಿಧಿ ಎಂಬುವುದನ್ನು ನಾವು ಒಪ್ಪಬಹುದಾದರೂ ಆರಂಬದಲ್ಲಿ ಶೈವ ಬ್ರಾಹ್ಮಣನಾಗಿದ್ದ ಎಂಬುದು ಅಬ್ಬಲೂರು ಶಾಸನದಲ್ಲಿ ಬರುವ 'ವೇದ ವೇದಾಮತ ವಿದಂ ಪಾವನ ಚರಿತ್ರ ಗುಣ ಸದ್ಬವ ಪುರುಷೋತ್ತಮ' ಎಂಬ ತಂದೆಯ ಹೆಸರಿನಿಂದ ತಿಳಿದುಬರುತ್ತದೆ. ರಾಮಯ್ಯನ ತಂದೆ ತಾಯಿಗಳು ಶೈವ ಬ್ರಾಹ್ಮಣರಾಗಿದ್ದಂತೆ ರಾಮಾಯ್ಯನ ಕಾಲಾನಂತರ ವಂಶಪರಂಪರೆಯಲ್ಲಿ ರಾಮಯ್ಯನ ಮೊಮ್ಮಗನೊಬ್ಬ ಶೈವ ಬ್ರಾಹ್ಮಣನಾಗಿದ್ದನು ಎಂಬುದು ಬಂದಳಿಕೆ ಶಾಸನದ 'ಏಕಾನ್ತದ ರಾಮಯಂಗಳ ಮಂಮ ರಾಮದೇವ ಭಟ್ಟರ ವೃತ್ತಿ'[೩೨] ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ. ಈ ಒಂದು ತಲೆಮಾರು ಬಿಟ್ಟರೆ ಮುಂದಿನ ವಂಶಪರಂಪರೆ ಸಂಪೂರ್ಣ ವೀರಶೈವ ಮತವನ್ನು ಅವಲಂಬಿಸಿತ್ತು ಎಂಬುದು ಕೆಂಪನಪುರ ಶಾಸನದ 'ಶ್ರೀ

ಮದೇಕಾಂತ ರಾಮೇಶ್ವರಾನ್ವಯೋ ಯ್ಭೂತ ಸಕಲ ಶಾಸ್ತ್ರ ಪಾರಾವಾರ ಪಾರಂಗತ ವೀರಶೈವ ಮತ ಸ್ಥಾಪಚಾರ್ಯ........ಶ್ರೀ ಮದೇಕಾರಿತ ಬಸವೇಶ್ವರರು'[೩೩] ಎಂಬ ಉಲ್ಲೇಕದಿಂದ ತಿಳಿದುಬರುತ್ತದೆ.

ಏಕಾಂತ ರಾಮಯ್ಯನ ತಂದೆ ತಾಯಿಗಳು ಅಬ್ಬಲೂರು ಶಾಸನದ ಪ್ರಕಾರ ಪುರುಷೋತ್ತಮ ಭಟ್ಟ ಮತ್ತು ಪದ್ಮಾಮಬಿಕೆ(ಸೀತಾದೇವಿ) ಅಬ್ಬಲೂರು ಚರಿತ್ರಯಲ್ಲೂ ಇದೇ ಹೆಸರುಗಳು ಕಂಡುಬರುತ್ತವೆ. ಹರಿಹರನು ತನ್ನ ಕಾವ್ಯದಲ್ಲಿ ರಾಮಯ್ಯನ ತಂದೆ ತಾಯಿಗಳು ಶಿವಭಕ್ತರು ಮಾತ್ರ ಎಂದು ಹೇಳಿದರೆ ಉಳಿದ ಕಾವ್ಯ ಪುರಾಣದಲ್ಲಿ ತಂದೆ-ತಾಯಿಗಳ ಪ್ರಸ್ತಾಪ ಇಲ್ಲ. ರಾಮಯ್ಯನ ಜನನದ ಹಿನ್ನೆಲೆಯನ್ನು ಗಮನಿಸುವುದಾದರೆ ರಾಮಯ್ಯನ ಜನನ ಅಬ್ಬಲೂರು ಶಾಸನದಲ್ಲಿ ದೈವಿಕ ಹಿನ್ನೆಲೆಯಿಂದ ಬಣ್ಣಿಸಲ್ಪಟ್ಟಿದೆ. ಜೈನಮತವು ಆ ಕಾಲಕ್ಕೆ ಪ್ರಬಲ ಮತವಾಗಿ ಹೊರಹೊಮ್ಮಿ ಅವನತಿಯತ್ತ ಪಯಣಿಸುತ್ತಿತ್ತು. ಎಂಬುದನ್ನು ಒಪ್ಪಿಕೊಳ್ಳಬಹುದು. ಬೌದ್ದ ಮತವು ಪ್ರಾಬಲ್ಯದಲ್ಲಿತ್ತು ಎಂಬುದಕ್ಕೆ ಆಧಾರಗಳಿಲ್ಲ. ಈಶ್ವರನು ವೀರಭದ್ರನನ್ನು ಕುರಿತು ನೀನು ನಿನ್ನಂಶದಿಂದ - ಒಬ್ಬನನ್ನು ಹುಟ್ಟಿಸಿ ಭೂಲೋಕಕ್ಕೆ ಶೈವಮತವನ್ನು ರಕ್ಷಿಸಲು ಎಂದು ಹೇಳಲು ವೀರಭದ್ರನು 'ಪುರುಷೋತ್ತಮ ಭಟ್ಟರ್ಗೆ ಸ್ವಪ್ನದೊಳ್ ಬಂದು ಪ್ರಸಾದಮಂಮಾಡಿ' ಹೋಗುತ್ತಾನೆ. ಪುರುಷೋತ್ತಮ ಭಟ್ಟನು ಸಂತಸ ಪಟ್ಟು ಮಗನನ್ನು ಪಡೆದು ರಾಮನೆಂಬ ಹೆಸರನ್ನು ಇಡುತ್ತಾನೆ. ಈ ಹೇಳಿಕೆಯನ್ನು ಸಮರ್ಥಿಸುವಂತೆ ಕೆಂಪನಪುರ ಶಾಸನವು ರಾಮಯ್ಯನನ್ನು 'ಶ್ರೀ ವೀರಭದ್ರೇ ನಿಜಸ್ವರೂಪ ಶ್ರೀಮದೇಕಾಂತ ರಾಮೇಶ್ವ' ಎಂದು ಸ್ತುತಿಸಿದೆ ಹರಿಹರನು ಇತರೆ ಶಿವಶರಣರನ್ನು ಕುರಿತು ರಚಿಸಿರುವ ರಗಳೆಗಳಲ್ಲಿ ಬಳಸಿರುವ ಸಿದ್ದ ಚೌಕಟ್ಟು ಏಕಾಂತ ರಾಮಯ್ಯನರಗಳೆಯಲ್ಲಿ ಕಂಡುಬರುವುದಿಲ್ಲ.

ಅಬ್ಬಲೂರ ಚರಿತದಲ್ಲಿ ಮಕ್ಕಳಿಲ್ಲದ ಸತಿಪತಿಗಳು ಶಿವನನ್ನು ಪ್ರಾರ್ಥಿಸಲು ಶಿವನು ಕನಸಿನಲ್ಲಿ ಬಂದು.....

"ಕದನ ಕೋಳಾಹಳ ಇದಿರಾದ ಶ್ರವಣರ
ಮರವ ಮುರಿವ ಶಿವಯೋಗಿ
ಮುದದಿಂದ ಏಕಾಂತ ರಾಮನೆಂಬುವ ನಿಮ್ಮ
ಉದರದಿ ಜನಿಸುವನೆಂದ"[೩೪]

ಎಂಬ ಹೇಳಿಕೆ ಇದೆ. ಅನ್ಯ ಮತದ ವಿರುದ್ದ ಹೋರಾಡಿ ವೀರಶೈವ ಧರ್ಮವನ್ನು ರಕ್ಷಿಸುವುದಕ್ಕೋಸ್ಕರ ರಾಮಯ್ಯ ಜನಿಸಿದನೆಂದ, ಎಂಬ ಸಂಗತಿ ಅಬ್ಬಲೂರು ಚರಿತೆಯಿಂದ ವ್ಯಕ್ತಿವಾಗುತ್ತದೆ.

ಏಕಾಂತರಾಮಯ್ಯ ಹುಟ್ಟಿನ ಕುರಿತು ಮೂರು ಜಾವಿ ಪರಂಪರಗೆ ಸೇರಿದ ಚಿಕೇಶ್ವ ಯತಿಗಳು. ಇದಕ್ಕೆ ಕಾರಣಕರ್ತರಾಗಿ ಅವರ ಮಹಿಮೆಯಿಂದ ಏಕಾಂತರಾಮಯ್ಯ ಜನಿಸಿದ ಎಂದು ತಿಳಿಯುತ್ತಾರೆ. ಅಬ್ಬಲೂರು ಚರಿತೆ ಪುರಾಣ ಪುರುಷೋತ್ತಮ, ಪದ್ಮಾವತಿ ಎಂಬ ದಂಪತಿಗಳಿಗೆ ಶಿವನು ಕನಸಿನಲ್ಲಿ ಬಂದು ಆಶೀರ್ವದಿಸಿದ. ಮರುದಿನ ಪುರುಷೋತ್ತಮನ ಕನಸಿನಲ್ಲಿ ಬಂದು.

ಕದನ ಕೋಳಾಹಳ ಇದಿರಾದ ಶ್ರವಣರ! ಮದವ ಮುರಿಯುವ ಶಿವಯೋಗಿ

ಮುದದಿಂದ ಏಕಾಂತರಾಮನೆಂಬ ನಿಮ್ಮ ! ಉದರದಿ ಜನಿಸಿದನೆಂದು!!

ಹೇಳಿದ. ಪುರುಷೋತ್ತಮನಿಗೆ ಶಿವ ಕೃಪೆಯ ಬಗ್ಗೆ ನಂಬುಗೆ ಹುಟ್ಟಿತು. ಪದ್ಮಾವತಿ ಗರ್ಭ ದರಿಸಿದಳು.

"ಹೋರೆ ಬೃಹಸ್ಪತಿ ರೇವತಿ ನಕ್ಷತ್ರ!

ವಾರ ರವಿಯು ಸಿಂಹಲಗ್ನ

ಸೋರ್ಯೋದಯಕ್ಕೆ ಮಗುವಿಗೆ ಜನ್ಮವಿತ್ತಳು"[೩೫]

ಎಂದು ಈ ಶಾಸನದಿಂದ ತಿಳಿಯುತ್ತದೆ.

ಅಬ್ಬಲೂರು ಚರಿತೆ ೬ ಸಂಧಿ, ೫೧೭ ಪದ್ಯಗಳ ಒಂದು ಲಘುಕೃತಿಯಾಗಿದೆ. ಪ್ರತಿಯೊಂದು ಸಂಧಿಯ ಆದಿಯಲ್ಲಿ ಬರುವ ಒಂದೊಂದು ವಾರ್ಧಕವನ್ನು ಬಿಟ್ಟರೆ ಮಿಕ್ಕವು ಸಾಂಗತ್ಯ ಪದ್ಯಗಳು ಸಾಧಾರಣ ಸತ್ವದ ರೂಢಿಮೂಲಶೈಲಿಯ ಈ ಕೃತಿಯ ಕರ್ತೃ ಅಂತರವಳ್ಳಿಯ ಶಾಂತನಿರಂಜನನಾಗಿದ್ದಾನೆ. ಕಾಶಿಯಿಂದ ಅಂತರವಳ್ಳಿಗೆ ಒಂದು ವಿಶ್ವಬ್ರಹ್ಮವಂಶ ಚಿಕ್ಕೇಶ(ಮೂರುಜಾವಿ ದೇವನ) ಪರಂಪರಿಗೆ ಸಂಬಂಧಿಸಿದವನಾಗಿದ್ದಾನೆ. ಈ ಮಹಾಪುರುಷನ ಕಥಾವಳಿಯು ಚಿಕ್ಕೇಶ್ವರನ ಘನತೆಯನ್ನು ನಿರೂಪಿಸುತ್ತದೆ.

ಏಕಾಂತರಾಮಯ್ಯನ ಜನನದ ಹಿನ್ನೆಲೆಯನ್ನು ನಾವು ಗಮನಿಸಿದರೆ, ಮೊದಲು ಮೂರುಜಾವಿ ಮಠದ ಮಹಾಗುರುಗಳಾದ ಚಿಕ್ಕೇಶ್ವರ ಯತಿಗಳು ನಮ್ಮ ಶಿಷ್ಯರಿಗೆ ಪ್ರವಚನವನ್ನು ನೀಡುತ್ತಿರುವಾಗ, ಈ ಪುಲಿಗೆರೆಯಿಂದ ಹೋನ್ನಯ್ಯನವರ ಜೊತೆಗೆ ಆಶ್ರಮವನ್ನು ಬಯಸಿ ದೂರದ ಅಲಂದಿಯಿಂದ ಪುರುಷೋತ್ತಮ ಮತ್ತು ಪದ್ಮಾಂಬಿಕೆ ಎಂಬ ದಂಪತಿಗಳು ಮಕ್ಕಳಿಲ್ಲದ ಕಾರಣ, ಚಿಂತೆಯಿಂದ ಆಶ್ರಮವನ್ನು ಬಯಸಿ ಬರುತ್ತಾರೆ ಅಲ್ಲದೆ, ಆಶ್ರಮದಲ್ಲಿ ಶಿವಪೂಜೆಯನ್ನು ಮಾಡಲು ತಮ್ಮ ಕೋರಿಕೆಯನ್ನು ಇಡೇರಿಸಿಕೋಳ್ಳಲು ಬರುತ್ತಾರೆ. ಇವರು ಆರಾಧ್ಯ ಬ್ರಾಹ್ಮಣರು, ಸಾತ್ವಿಕರು, ಶಿವಪೂಜೆ ನಿಷ್ಠೆ ಗರಿಷ್ಠರು ಆಗಿದ್ದಾರೆ ಎಂದು ಹೇಳಬಹುದು.

ಈ ದಂಪತಿಗಳ ಮಾತನ್ನು ಕೇಳಿದ ಚಿಕ್ಕೇಶ್ವರರು ಈ ಕಾಲದಲ್ಲಿ ಹುಟ್ಟಿರುವ ನಾವೆಲ್ಲರೂಧನ್ಯರೇ, ಮುಂದೆ ನಾವು ಅನೇಕ ಅದ್ಭುತಗಳನ್ನು ಕಾಣಬಲ್ಲೆವು, ನಡೆಸಬಲ್ಲೇವು!, ಇದೆಲ್ಲಾ ಕಾಲದ ಮಹಿಮೆ ಈಗ ವೈದಿಕ ಧರ್ಮ ಹ್ರಾಸ. ಸಮಣ ಧರ್ಮ ಆರ್ಭಟ ಅತಿಯಾಗಿದೆ. ಇವುಗಳಿಗೆ ಬೇರೋಂದು ತಿರುವನ್ನು ಕೊಟ್ಟು ಜನರಿಗೆ ಸರಿಯಾದ ಹಾದಿಗೆ ಹಚ್ಚುವ ಕೆಲಸಕ್ಕೆ ಬುನಾದಿ ಹಾಕುವ ಹೊಣೆಗಾರಿಕೆ ನಮ್ಮ ಮೇಲಿದೆ. ಮುಂದೆ ನಿಮ್ಮ ಮಗನು ಈ ಕಾರ್ಯದಲ್ಲಿ ಪಾಲುದಾರನಾಗುವಂತಿದ್ದರೆ, ನಿಮಗೆ ಕಂಡಿತ ಮಕ್ಕಳಾಗುತ್ತವೆ. ಇವನು ಇಡೀ ಶಿವನ ಮಹಿಮೆಯನ್ನು ಸಾರುವ ಮಗುವಾಗಿ ಹುಟ್ಟುತ್ತಾನೆ ಎಂದು ಹೇಳುತ್ತಾರೆ. ಇದನ್ನು ಕೇಳಿದ ಪುರುಷೋತ್ತಮರು ನಮಗೆ ಬೇಕಾಗಿರುವುದು ಮಗ ನಮ್ಮ ಮುಂದಿನ

ಪಿಳಿಗೆಗೆ ಶಿವದೇವರ ಪೂಜೆಯನ್ನು ಮಾಡಲು ಅಷ್ಟೆ ಇದಕ್ಕಿಂತ ಹೆಚ್ಚು ನಮಗೇನು ಬೇಕು ಎಂದು ಹೇಳುತ್ತಾರೆ.

ನಂತರ ಚಿಕ್ಕೇಶ್ವರ ಗುರುಗಳು ನಿಮಗೆ ಒಳ್ಳೆಯ ಪುತ್ರನೇ ಲಭಿಸುತ್ತಾನೆ. ಅವನು ಅದ್ಭುತ ಕ್ರಾಂತಿಯನ್ನು ತಂದು ಶಿವನ ಮಹಿಮೆಯನ್ನು ಲೋಕಕ್ಕೆ ಸಾರುವಂತಹ ಮಗ ಜನಿಸುತ್ತಾನೆ ಎಂದು ಹೇಳಿದರು.

ತಾವು ನಮ್ಮ ಆಶ್ರಯದಲ್ಲಿ ಒಂದು ಮಂಡಲ ಕಾಲ ಉಳಿದುಕೊಳ್ಳ ಬೇಕು. ನಂತರ ಶಿವಲಿಂಗವನ್ನು ಪೂಜಿಸಿ, ದೇವರು ನಿಮಗೆ ಒಳ್ಳೆಯದನ್ನು ಮಾಡುತ್ತಾನೆ ಎಂದು ಹೇಳಿದರು ನಂತರ ಇವರ ಆಶ್ರಮದಲ್ಲಿ ಸೇವೆಯಲ್ಲಿ ನಿರತರಾಗಿದ್ದು. ಅವರ ಸೇವಾ, ಭಾವ, ಶಿವಭಕ್ತಿ ನಿಷ್ಟೆಗಳು ಚಿಕ್ಕೇಶ್ವರರನ್ನು ಬಹುಬೇಗ ಆಕರ್ಷಿಸಿದವು. ಒಂದುದಿನ ಚಿಕ್ಕೇಶ್ವರರು ತಮ್ಮ ಗುರುಗಳಾದ ರೂಡಾಚಾರ್ಯರ ಪಾದುಕೆ ಪೂಜೆ ಮುಗಿಸಿ ತೀರ್ಥ ಪ್ರಸಾದಗಳನ್ನು ತಂದು ಆ ದಂಪತಿಗಳಿಗೆ ಕೊಡುತ್ತಾ, "ನಿಮಗಾಗಿ ವಿಶೇಷವಾಗಿ ನಮ್ಮ ಗುರುಗಳನ್ನು ಕೋರಿದ್ದೇನೆ. ಅವರು ಶೈವಾಗಮ ಪ್ರವೀಣರಾದುದ್ದರಿಂದ ಅವರು ನಿಮಗೆ ಬಹುಹತ್ತಿರದವರಾಗಿ ನಿಮಗೆ ಮಂಗಳವನ್ನುಂಟು ಮಾಡುತ್ತಾರೆ. ನಿಮ್ಮ ಮಗನಿಂದ ದೊಡ್ಡ ಕೆಲಸವೇ ನಡೆಯಲಿದೆ." ನಮ್ಮ ಗುರುಗಳನ್ನು ಮರೆಯಬೇಡಿ ಸದಾ ಧ್ಯಾನಮಾಡಿ ಎಂದು ಹೇಳುತ್ತಾರೆ. ಕೆಲವು ದಿನಗಳ ನಂತರ ಪುರುಷೋತ್ತಮ ಮತ್ತು ಪದ್ಮಾಂಬಿಕೆ ಎಂಬ ದಂಪತಿಗಳಿಗೆ ಗಂಡುಮಗು ಜನಿಸಿತು. ಬಹು ಅಕ್ಕರೆಯಿಂದ ಮತ್ತು ಶ್ರದ್ದೆಯಿಂದ ಮಗನಿಗೆ ಏಕೋರಾಮರಾಧ್ಯ ಎಂದು ನಾಮಕರಣ ಮಾಡಿದರು. ಅದು ರೂಢಿಯಲ್ಲಿ ಏಕಾಂತ ರಾಮ ಎಂದಾಯಿತು.

ಏಕಾಂತ ರಾಮನು ಚಿಕ್ಕವಯಸ್ಸಿನಲ್ಲಿ ಅವನ ಅಭ್ಯಾಸವು ಆಶ್ರಮದಲ್ಲಿ ನಡೆದಿತ್ತು. ದಿನನಿತ್ಯವು ಪ್ರವಚನ, ವಿಚಾರ ಶಕ್ತಿ ಹೆಚ್ಚಾಗುತ್ತಾ ಹೋಯಿತು, ಅಲ್ಲದೆ ರಾಮನಿಗೆ ಜೈನರ ತೊಂದರೆ ನಮ್ಮ ಶಿವಪೂಜೆಗೆ ಉಂಟಾಗುವ ಕಿರಿಕಿರಿ ದಬ್ಬಾಳಿಕೆ ಇವರ ಮಧ್ಯೆ ನಾನು ತೊಂದರೆಗಳಿಂದ ಉಂಟಾಗುವ ಜನರ ಪರಿಚಯ ಚನ್ನಾಗಿ ಗೊತ್ತಿತ್ತು. ಈ ಪರಿಸ್ಥಿತಿಯಿಂದ ಜನರಿಗೆ ಮುಕ್ತಿಕೊಡಬೇಕೆಂಬುದು ಇವನ ಆಸೆಯಾಗಿತ್ತು. ಅಲ್ಲದೆ ರಾಮನಲ್ಲಿ ಸದಾ ಉತ್ಸಾಹದ ಚಿಲುಮೆ ಪುಟಿಯುತ್ತಿತ್ತು. ಏಕಾಂತರಾಮನು ಚಿಕ್ಕವಯಸ್ಸಿನಲ್ಲಿ ಶಾಸ್ತ್ರರ್ಥ ಚಿಂತನೆ ಅಭ್ಯಾಸವನ್ನು ಗುರುವಿನಿಂದ ರೂಢಿಸಿಕೊಂಡಿದ್ದನು.

ಗೌತಮ ಕ್ಷೇತ್ರವನ್ನು ಜನರು ಅಂತರವಳ್ಳಿ ಎಂದು ಗುರುತಿಸಿದ್ದಾರೆ. ಈ ಭಾಗದಲ್ಲಿ ಶಂಖ ಪಾಲನೆಂಬ ಪಾಳೆಗಾರ ಆ ದೇಶದ ಅರಸ ಬಿಜ್ಜಳ ಇವರೆಲ್ಲರೂ ಜೈನರಾಗಿದ್ದರು. ಆ ಕಾಲದಲ್ಲಿ ಜೈನರಿಗೆ ಹೆಚ್ಚು ಹಮ್ಮಿತ್ತು. ಜನರಲ್ಲಿ ಜೈನರೆಂದರೆ ಭಯವು ಇತ್ತು. ಇತರ ಮತಗಳಿಂದ ಜೈನ ಮತಕ್ಕೆ ಮತಾಂತರಗೊಳಿಸುವ ಪದ್ಧತಿಯೂ ರೂಡಿಯಲ್ಲಿದುದರಿಂದ ಇದ್ದಕ್ಕಿದ್ದಂತೆಯೇ ಊರಿನವರೆಲ್ಲರೂ ಜೈನ ಧರ್ಮಕ್ಕೆ ಮತಾಂತರಾಗುತ್ತಿದ್ದರು. ಇಲ್ಲಿನ ಅರಸನು ಕೂಡ ಜೈನಧರ್ಮಕ್ಕೆ ಸೇರಿದವನಾಗಿದ್ದರಿಂದ

"ಅರಸನ ಕುಲವೇ ಪ್ರಜೆಗಳ ಕುಲವಾಗಿದ್ದರೆ ಅನೇಕ ಲಾಭಾಂಶಗಳು ದೊರೆಯುತ್ತವೆ. ಎಂಬುದು ಜನಧನಿಯವಾಗಿತ್ತು. ಜೈನಧರ್ಮದವರು ಈ ರೀತಿಯ ಪ್ರಚಾರವನ್ನು ಮಾಡುತ್ತಿದ್ದರು.

ಇವರ ವಿರುದ್ಧ ಹೋರಾಡಲು ಏಕಾಂತ ರಾಮಯ್ಯ ಅವತಾರ ಪುರುಷನಾಗಿ ಕಾಣಿಸಿಕೊಳ್ಳುತ್ತಾನೆ. ಈ ರೀತಿಯಾಗಿ ಜನನದ ಕಾರಣವು ದೈವಿಕ ಆರೋಪದಿಂದ ಕೂಡಿದೆಯಾದರೂ ಆ ಕಾಲದ ವಸ್ತುಸ್ಥಿತಿಯನ್ನು ಸಾಂಕೇತಿಕವಾಗಿ ಗುರುತಿಸಬಹುದಾಗಿದೆ.

**೨.೫ ಏಕಾಂತವಾದ**

ಏಕಾಂತವಾದ ಪದವು ಅಬ್ಬಲೂರು ಚರಿತೆಯಲ್ಲಿ ಕಂಡುಬರುತ್ತದೆ. ಈ ಏಕಾಂತವಾದವು 'ಏಕಾಂತ' ಎಂಬ ವಿಶೇಷಣ ಪದದಿಂದ ಬಂದಿದೆ. ಏಕಾಂತ ಎಂದರೆ ಮನಸ್ಸನ್ನು ಒಂದುಕಡೆ ಕೇಂದ್ರಿಕರಿಸುವುದು, ಸದಾ ಧ್ಯಾನದಲ್ಲಿ ಇರುವುದಾಗಿದೆ. ಇಲ್ಲಿ ಏಕಾಂತ ರಾಮಯ್ಯನು. ತನ್ನ ಏಕಾಗ್ರಹಚಿತ್ತತೆಯಿಂದ ತನ್ನ ಆರಾಧ್ಯ ದೈವವಾದ ಶಿವನನ್ನು ಪೂಜಿಸುವುದಾಗಿದೆ. ಅಂದರೆ ಏಕಾಂತ ರಾಮಯ್ಯನು, ತನ್ನ ಮನಸ್ಸನ್ನು ಬೇರೆಕಡೆ ಸೆಳೆಯದೆ ಏಕ ಮನಸ್ಕನಾಗಿ ಶಿವನನ್ನು ಧ್ಯಾನಿಸುತ್ತಿದ್ದನು ಎಂದು ಕಂಡು ಬರುತ್ತದೆ.

ಕೆಂಪನಪುರ ಶಾಸನವು ಜೈನರ ಅನೇಕಾಂತವಾದವನ್ನು ವಾಗ್ಮೀಯಾಗಿದ್ದ ರಾಮಯ್ಯನು ಮುರಿದಿದ್ದ ಎಂಬ ವಿವರವನ್ನು ಸೂಚಿಸಿದೆ. ರಾಮಯ್ಯನಿಗೆ ಏಕಾಂತ ವಿಶೇಷಣ ಬಂದ ಬಗೆಗೆ ಅಬ್ಬಲೂರು ಶಾಸನದಲ್ಲಿರುವ ವಿವರಣೆಯು ಮೊಟ್ಟ ಮೊದಲಿಗೆ ಚನ್ನ ಬಸವಾಂಕನ, ಮಹಾದೇವಿಯಕ್ಕನ ಪುರಾಣದಲ್ಲಿ ವ್ಯಕ್ತಗೊಂಡಿದೆ. ಉಳಿದ ಕಾವ್ಯ ಪುರಾಣಗಳಲ್ಲಿ ಈ ಸಂಗತಿ ಉಕ್ತಗೊಂಡಿಲ್ಲ. ಪೂಜ್ಯನಾದ ವ್ಯಕ್ತಿಯ ಮಹಿಮೆಯನ್ನು ಅತಿಶಯಿಸುವುದಕ್ಕಾಗಿ ಸಹಜವಾರು ಘಟನೆಯನ್ನು ಮಾರ್ಪಾಡು ಮಾಡಿ ಪವಾಡವನ್ನು ಆರೋಪಿಸಿರುವ ಪ್ರಸಂಗ ಸಿಂಗಿರಾಜ ಪುರಾಣದಲ್ಲಿ ಸಂಕ್ಷಿಪ್ತವಾಗಿ ಏಕಾಂತ ರಾಮಯ್ಯನ ಕುರಿತ ಕಥೆಯಲ್ಲಿ ವ್ಯಕ್ತವಾಗಿದೆ. ಅಬ್ಬಲೂರು ಚರಿತದಲ್ಲಿ ಇವೆಲ್ಲದಕ್ಕಿಂತ ಬದಲಾಗಿ ರಾಮಯ್ಯನ ಹುಟ್ಟು ಹೆಸರಿನೊಂದಿಗೆ ಏಕಾಂತ ಪದ ಜನ್ಮದತ್ತವಾಗಿ ಬಂದಿತ್ತು.[೩೬] ಏಕಾಗ್ರ ಚಿತ್ತತೆಯಿಂದ ಏಕಾಂತದಲ್ಲಿ ಶಿವನನ್ನು ಆರಾಧಿಸಿ ಪಡೆದ ಏಕಾಂತ ವಿಶೇಷಣ ಮುಂದೆ ಜೈನರ ಅನೇಕಾಂತವಾದವನ್ನು ವಾದದಲ್ಲಿ ಮುರಿದ ಎಂಬ ಹೇಳಿಕೆಯಿಂದ ಈ ಏಕಾಂತವಾದ ಪದವು ಇನ್ನಷ್ಟು ಬಲಗೊಂಡಿತು ಎಂದು ಹೇಳಬಹುದು.

**ಅಡಿಟಿಪ್ಪಣಿ**

೧) ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ನಾಡಿನ ಚರಿತ್ರೆ-ಕರ್ನಾಟಕ ಧರ್ಮಗಳು. ಪುಟ ೨೬

೨) ಅದೇ ಪುಟ ೨೭

೩) ಅದೇ ಪುಟ ೨೭

೪) ಅದೇ ಪುಟ ೨೮

೫) ಅದೇ ಪುಟ ೨೯

೬) ಹಂಡಿಕಿ ಕೆ.ಕೆ. ಯಶಸ್ತಲಕ ಆ್ಯಂಡ್ ಇಂಡಿಯನ್ ಕಲ್ಚರ್, ಪುಟ ೪೬೩

೭) ಕಾಪಾಲಿಕ ಮತ್ತು ಕಾಳಾಮುಕಾಸ್ ಟು ಲಾಸ್ಟ್ ಶೈವಶೆಟ್ಟರ್ (ಡೆವಿಡ್ ಲಾರೆಂಜ್ನ) ಪುಟ ೧೬

೮) ಸಣ್ಣಯ್ಯ ಬಿ.ಎಸ್. ಅರಿವಿನ ಮಾರಿತಂದೆ ವಚನಗಳು. ವಚ. ೧೯೭, ಪುಟ ೩೬

೯) ಹಿರೇಮಠ ಆರ್.ಸಿ. ಚನ್ನಬಸವನ ವಚನಗಳು, ವಚ ೫೨೮. ಪುಟ ೨೦೩.

೧೦) ಅದೇ ವಚ. ೫೨೮, ಪುಟ ೨೦೩

೧೧) ಎ.ಕ. ರೈಸ್. ಸಂಪುಟ XI, ೫೭.

೧೨) ಕರ್ನಾಟಕ ಇನ್ಸ್ ಕ್ರಿಪ್ಷನ್ ಸಂಪುಟ ೧. ಪುಟ ೨೪೧.

೧೩) ಯಲ್ಲಪ್ಪ .ಕೆ. ಹಾವೇರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ. ಅ ಪ್ರಕಟಿತ ಪಿ.ಹೆಚ್.ಡಿ. ಮಹಾಪ್ರಬಂಧ

೧೪) ಹಿರೇಮಠ ಎಸ್.ಎಸ್. ಲಾಕುಳದರ್ಶನ. ಪುಟ ೧೯

೧೫) ಎ.ಇ ರೈಸ್. ಸಂಪುಟ XXI. ಶಾ.೧ ಕ್ರಿ.ಶ.೨೮೦

೧೬) ಬಂಡಾರಕರ್ ಆರ್.ಜಿ. ವೈಷ್ಣವಮ್, ಶೈವಿಜಮ್, ಅಂಡ್ ಮೈನರ್ ರಲಿಜಿಯನ್ ಸಿಸ್ಟಮ್. ಪುಟ ೧೬೫

೧೭) ಕಟಪಟ್ಟಿ ಎನ್.ಎಂ. ಕರ್ನಾಟಕದ ಶೈವಧರ್ಮ. ಪುಟ ೨೦

೧೮) ಶಿವರುದ್ರಸ್ವಾಮಿ. ಡಾ. ಎಸ್.ಎನ್. ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ. ಪುಟ ೧೮

೧೯) ಅದೇ ಪುಟ ೨೫೬

೨೦) ಅದೇ ಪುಟ ೨೫೭

೨೧) ಅದೇ ಪುಟ ೨೫೮_೨೫೯

೨೨) ಅದೇ ಪುಟ ೨೫೯.

೨೩) ಅದೇ ಪುಟ ೧೭೯

೨೪) ಅದೇ ಪುಟ ೧೭೯

೨೫) ಅದೇ ಪುಟ ೧೮೦

೨೬) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ ಪುಟ ೪

೨೭) ಅದೇ ಪುಟ ೪

೨೮) ನಂದಿಮಠ ಎಸ್.ಸಿ. ವೀರಶೈವ ಧರ್ಮದ ಕೈಪಿಡಿ. ಪುಟ ೧೨

೨೯) ಆಚಾರಿ ಮಂಜುಳ. ಕಾಳಾಮುಖ ಪರಂಪರೆ ಮತ್ತು ಮೂರುಜಾವಿ ಪೀಠ ಸಾಂಸ್ಕೃತಿಕ ಅಧ್ಯಯನ ಪಿ.ಹೆಚ್.ಡಿ. ಅಪ್ರಕಟಿತ ಪ್ರಬಂಧ ಪುಟ ೧೬೨

೩೦) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ ಪುಟ ೪೨

೩೧) ದೇಸಾಯಿ ಪಿ.ಬಿ. ವೀರಶೈವ ಸಂಶೋಧನೆ ಶರಣ ಸಾಹಿತ್ಯ. ಪುಟ ೧೨೭

೩೨) ಎ.ಸಿ. ರೈಸ್. ಸಂಪುಟ VII. ಶಿಕ. ೨೩೫

೩೩) ಎ.ಸಿ. ರೈಸ್. ಸಂಪುಟ VI, ಹೊಸ ಆವೃತಿ ಚಾಮರಾಜನಗರ, ಪುಟ ೧೪೪

೩೪) ಬಸವರಾಧ್ಯ ಎನ್. ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ ,ಪುಟ ೧೬

೩೫) ಅದೇ ಪುಟ ೧೬

೩೬) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ, ಪುಟ ೪೫

## ಅಧ್ಯಾಯ ೩ ಏಕಾಂತ ರಾಮಯ್ಯ ಜೈನರೊಡನೆ ಸಂಘರ್ಷ

೩.೧ ಜೈನ ಮತ

೩.೨ ಅನೇಕಾಂತವಾದ

೩.೩ ಏಕಾಂತ ರಾಮಯ್ಯನ ಪವಾಡ

೩.೪ ಏಕಾಂತ ರಾಮಯ್ಯ ಜೈನರೊಡನೆ ಸಂಘರ್ಷ

# ಅಧ್ಯಾಯ ೩

## ಏಕಾಂತ ರಾಮಯ್ಯ ಜೈನರೊಡನೆ ಸಂಘರ್ಷ

ನಮ್ಮ ಕನ್ನಡ ನಾಡು ಹಲವು ಧರ್ಮಗಳಿಂದ ಕೂಡಿದ ನಾಡು ಇಲ್ಲಿ ಎಲ್ಲ ಧರ್ಮಗಳು ತನ್ನದೆ ಆದ ಸ್ಥಾನವನ್ನು ಹೊಂದಿದ್ದವು. ಯಾವುದೇ ಒಂದು ಧರ್ಮ ತನ್ನ ಪ್ರಾಭಲ್ಯವನ್ನು ಹೊಂದಲು ಆರ್ಥಿಕ ಸಬಲತೆಯೇ ಪ್ರಮುಖವಾಗಿದೆ. ಅದರೊಂದಿಗೆ ಸಾಮಾಜಿಕ ಹಿತವನ್ನು ಸಾಧಿಸಲು ಯತ್ನಿಸುತ್ತದೆ. ಸಾಮಾಜಿಕ ಹಿಡಿತ ಸಾಧಿಸಲು ಆರ್ಥಿಕ ಮೂಲಗಳಾದ ಕೃಷಿ, ಕೈಗಾರಿಕೆ, ವ್ಯಾಪಾರ ಮುಂತಾದವುಗಳ ಮೇಲೆ ಹಿಡಿತ ಸಾಧಿಸಿಕೊಂಡು ಧರ್ಮ ಪ್ರಚಾರದೊಂದಿಗೆ ಪ್ರಭುತ್ವಗೊಳಿಸುತ್ತಿವೆ. ಈ ಒಂದು ಸಂಧರ್ಭದಲ್ಲಿ ಅನೇಕ ಸಂಘರ್ಷಗಳು, ಪರಧರ್ಮ ಸಹಿಷ್ಣುತೆ ಇತ್ಯಾದಿ ಸಂಭಾಷಣೆಗಳು ನಡೆಯುತ್ತವೆ. ಮತ್ತು ರಾಜ ಪ್ರಭುತ್ವದ ಆಶ್ರಯ ಲಭಿಸಿದಂತೆ ಆರ್ಥಿಕ ಸಹಾಯದೊಂದಿಗೆ ಅನ್ಯಧರ್ಮಗಳ ಮೇಲೆ ದಾಳಿಗೂ ಅಂಜುವುದಿಲ್ಲ ಇದರಿಂದ ಸಮಾಜದಲ್ಲಿ ಸಹಿಸಿಕೊಳ್ಳಲಾರದ ಪರಿಣಾಮಗಳನ್ನು ಕಾಣಬಹುದು. ಇಂತಹ ಸಂದರ್ಭದಲ್ಲಿ ಧರ್ಮ ಶ್ರೇಷ್ಠತೆಯನ್ನು ಎತ್ತಿ ಹಿಡಿಯಲು ಅನೇಕ ಹೋರಾಟಗಳು ನಡೆದು ಬಂದಿವೆ. ಅಲ್ಲದೆ ಕೆಲವು ಧರ್ಮ ಧರ್ಮಗಳ ಸಂಘರ್ಷಕ್ಕೆ ಕಾರಣವಾಗಿವೆ. ಇಂತಹ ವಿಚಾರಗಳನ್ನು ಸಾಹಿತ್ಯ ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ಕಾಣಬುಹುದಾಗಿದೆ.

ಬೌದ್ಧ-ಜೈನ, ಬೌದ್ದ-ಶೈವ, ಜೈನ-ಶೈವ, ಜೈನ-ವೈಷ್ಣವ ಧರ್ಮವಿರಬಹುದು. ಇವು ಇತಿಹಾಸದುದ್ದಕ್ಕೂ ನಡೆಯುತ್ತಾ ಬಂದಿವೆ. ಅದರಂತೆ ಮತಾಂತರ ಸಹಿತಧರ್ಮ ಸಮಾನತೆ ಕಂಡು ಬರುವುದು ಅಪರೂಪವಾಗಿದೆ. ಅನೇಕ ರಾಜರು ಪರಧರ್ಮ ಸಹಿಷ್ಣುಗಳಾಗಿದ್ದರೆಂಬುದನ್ನು ಮರೆಯುವಂತಿಲ್ಲ. ಆದರೆ ದೇಗುಲಗಳ ಪರಿವರ್ತನೆ ಮೂರ್ತಿಗಳ ಬದಲಾವಣೆ ಇವು ಸಾಮಾಜಿಕಸ್ತರದಲ್ಲಿ ಅನೇಕ ಸಂಘರ್ಷಗಳನ್ನು ಹುಟ್ಟು ಹಾಕಿರುವುದನ್ನು ಕಾಣುತ್ತೇವೆ. ಈ ಹಿನ್ನಲೆಯಲ್ಲಿ ಅನೇಕ ಬಸದಿಗಳು ಮತ್ತು ದೇವಾಲಯಗಳು ಕಂಡುಬಂದಿವೆ. ಧರ್ಮ ವ್ಯವಸ್ಥೆಯೂ ಅಳಿದರೆ ಅರಸರ ಅಸ್ತಿತ್ವವೇ ಅಲುಗಾಡಿತ್ತಿತ್ತು. ಅರಸ ಪ್ರಭುತ್ವಕ್ಕೆ ಮತ್ತೊಂದು ರೀತಿಯಲ್ಲಿ ಇಡಿ ರಾಜ್ಯಾಡಳಿತವೇ ಕುಸಿದು ಬೀಳುವ ಭಯ ಉಂಟಾಗುತ್ತಿತ್ತು. ಧಾರ್ಮಿಕ ವ್ಯವಸ್ಥೆಯು, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಹಿಡಿದಿಟ್ಟಿರುವುದು ಮುಖ್ಯ ಕಾರಣವಾಗಿದೆ. ಅರಸನು ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಮುಂದುವರೆಸಲು ನಿರ್ದಿಷ್ಟ ಧರ್ಮಕ್ಕೆ ಬದ್ಧನಾಗಿ ಕಾರ್ಯನಿರ್ವಹಿಸುವುದು ಕಂಡುಬಂದಿದೆ.

### ೩.೧ ಜೈನ ಮತ:

ಜೈನ ಧರ್ಮವು ಪ್ರಮುಖ ಧಾರ್ಮಿಕ ಪಂಥವಾಗಿದೆ. ಹಿಂದು ಧರ್ಮದ ಸಮಾಜ ತತ್ವಗಳ ಆಧಾರದ ಮೇಲೆ ವಿವಿಧ ವಿಧಾನಗಳು ಆರಂಭವಾಗುತ್ತಿದಂತೆ ಇನ್ನೊಂದು ಕಡೆಯಲ್ಲಿ ಶ್ರೇಷ್ಟವಾದ ತತ್ವಗಳು, ಅರ್ಥಹೀನ ಸಂಪ್ರದಾಯಗಳು, ಸಮಾಜದಲ್ಲಿ ಬಲಿಷ್ಟವಾದವು. ಇದಕ್ಕೆ ಪ್ರತಿಯಾಗಿ ಸರಳ ಹೊಸ ಮಾರ್ಗಗಳನ್ನು ಕಂಡುಕೊಂಡು ಜೈನ ಧರ್ಮವು ಹುಟ್ಟಿಕೊಂಡಿತು. ಈ ಧರ್ಮದ ಸಿದ್ಧಾಂತದ ಪ್ರಕಾರ ಇದು ವಿಶ್ವದ ಅನಂತ ಸತ್ವಗಳ ಮೇಲೆ ಆಧಾರಿತವಾದ ಧರ್ಮ. ಪಾರಂಪರಿಕ ನಂಬಿಕೆಯ ಅನುಸಾರ ಋಷಭದೇವ ಈ ಸತ್ಯಗಳನ್ನು ಮೊದಲು ಅರಿತನಾಗಿದ್ದಾನೆ. ಋಷಭದೇವನ ನಂತರ ಬಂದ ೩೨ನೆ ತೀರ್ಥಂಕರರಲ್ಲಿ ಕೊನೆಯವನು ವರ್ಧಮಾನ ಮಹಾವೀರನಾಗಿದ್ದಾನೆ.

"ಶಬ್ದದ ಉತ್ಪತ್ತಿಯನ್ನು ಗಮನಿಸುವುದಾದರೆ ಜೈನ ಎಂದರೆ "ಜಿನ" ಎಂಬ ಶಬ್ದದಿಂದ ಉತ್ಪತಿಯಾದ ಶಬ್ದವಾಗಿದ್ದು ಜಿನ ಎಂದರೆ 'ಇಂದ್ರಿಗಳನ್ನು ಗೆದ್ದವನು' ಎಂದು ಹೇಳಬಹುದು. ಕರ್ಮದ ಕಟ್ಟನ್ನು ಮುರಿದು ಸಂಸಾರವನ್ನು ದಾಟಿ ಮುಕ್ತಿಯನ್ನು ಪಡೆಯುವ ಜನರಿಗೆ 'ಜಿನರು' ಎಂದು ಹೆಸರು. ಈ ಜಿನರಿಂದ ಉಪದೇಶಿಸಲ್ಪಟ್ಟ ಧರ್ಮವೇ ಜೈನ ಧರ್ಮವಾಗಿದೆ"[೧]

ಕ್ರಿ.ಶ. ಆರಂಭದ ಮೊದಲೇ ಕರ್ನಾಟಕವನ್ನು ಪ್ರವೇಶಿಸಿದ ಜೈನಧರ್ಮ ಹನ್ನೆರಡನೆಯ ಶತಮಾನಕ್ಕಾಗಲೆ ಅನೇಕ ದೇವಾಲಯಗಳ ನಿರ್ಮಾಣ ಆಚರಣೆಗಳ ಮೂಲಕ ಕನ್ನಡ ನಾಡಿನ ಪ್ರಮುಖ ಮನೆತನಗಳ ರಾಜಾಶ್ರಯ ಪಡೆದುಕೊಂಡಿತ್ತು. "ಚಂದ್ರಗುಪ್ತ ಮೌರ್ಯ, ಭದ್ರಬಾಹುವು ನೊಡನೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದಾಗಿನಿಂದ ಇದರ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಜೈನ ಧರ್ಮದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಶಾಖೆಗಳು ಉಗಮವಾದವು."[೨] ದಿಗಂಬರ ಪಂಥ ಕರ್ನಾಟಕದಲ್ಲಿ ಮೊದಲಿನಿಂದಲೂ ಪ್ರಚಾರದಲ್ಲಿತ್ತು. ಜೀವನ ಮತ್ತು ಅನುಭವಗಳನ್ನು ಜೈನಧರ್ಮ ದರ್ಶನವು ಆಧಾರವಾಗಿ ಅವಲಂಭಿಸಿದೆ. ಮೋಕ್ಷವೇ! ಜೀವನದ ಪರಮೋದ್ದೇಶ ಅದನ್ನು ತ್ರಿಪದಿ ಪಥಗಳಿಂದ ಸಾಧಿಸಬಹುದು. ಸಮ್ಯಕ್ ದರ್ಶನ. ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ ಜೀವನ ಸಮಸ್ಯಗಳ ಒಟ್ಟು ಸರಿಯಾದ ಮಾರ್ಗದಲ್ಲಿ ನಡೆದರೆ ಪರಮಗುರಿಯನ್ನು ಮುಟ್ಟಬಹುದು. ಅನೇಕಾಂತವನ್ನು ಅಂದರೆ ಅನೇಕ ಮಾರ್ಗಗಳಿಂದ ಪರೀಕ್ಷಿಸಿ ನೋಡುವುದರಿಂದಲೆ ಗುರಿ ಸೇರುವುದಕ್ಕೆ ಸರಿಯಾದ ದೃಷ್ಠಿ ದೊರೆಯುತ್ತದೆ ಎಂಬುದು ಜೈನರ ನಂಬಿಕೆಯಾಗಿದೆ.

"ಜೈನಧರ್ಮ ಗಂಗ–ಹೊಯ್ಸಳರ ರಾಜಮನೆತನಗಳೊಂದಿಗೆ ಬೆಳೆಯಿತು. ಹೊಯ್ಸಳರಾಜ ವಿಷ್ಣುವರ್ಧನನ ರಾಣಿ ಶಾಂತಲೆಯು ಕ್ರಿ.ಶ. ೧೧೩೧ರಲ್ಲಿ ಶಿವಗಂಗೆಯಲ್ಲಿ ಸಲ್ಲೇಖನ ವ್ರತ ಕೈಗೊಂಡು ಪ್ರಾಣತ್ಯಾಗ ಮಾಡಿದಳೆಂದು ತಿಳಿದು ಬರುತ್ತದೆ. ಶಾಂತಲೆಯು ಜೈನಮತ ಅವಲಂಬಿಯಾಗಿದ್ದಳು. ಅವಳು ಶ್ರವಣ ಬೆಳಗೊಳದಲ್ಲಿ ಕೆಲವು ಜೈನ ಬಸದಿಗಳನ್ನು ನಿರ್ಮಿಸಿದಳು." ಅವಳು ಶಿವ ಗಂಗೆಯಲ್ಲಿ ಸಲ್ಲೇಖನ ವ್ರತಕ್ಕೆ ಆರಿಸಿ ಕೊಂಡಿರುವುದಕ್ಕೆ ಆ ಪ್ರದೇಶ ಅಂದು ಪ್ರಮುಖ ಜೈನಕೇಂದ್ರ ಚಟುವಟಿಕೆಗಳ ತಾಣವಾಗಿತ್ತೆಂದು ಕಂಡುಬರುತ್ತದೆ. ಕರ್ನಾಟಕದಲ್ಲಿ ದಿಗಂಬರ ಮತ್ತು ಯಪನೀಯ ಪಂಥಗಳು

ಜನಪ್ರೀಯವಾಗಿದ್ದವು. ಗಂಗ ವಂಶದ ಸ್ಥಾಪನೆಗೆ ಜೈನಮುನಿಗಳೇ ನೆರವಾದರು. ಗಂಗರ ಕಾಲದಲ್ಲಿ ಅರಸರು ರಾಜಗುರುಗಳಾಗಿ ಕಂಡುಬರುತ್ತಾರೆ. 'ಜಿನಸೇನಾರ್ಯ, ಅಜೀತ ಸೇನಾಚಾರ್ಯ, ವೀರಸೇನಾಚಾರ್ಯ, ಶಿವನಂದಿ ಆಚಾರ್ಯ, ದೇವನಂದಿ ಆಚಾರ್ಯ, ಮೇಘನಂದಿ ಆಚಾರ್ಯ."[೩] ಮುಂತಾದವರು ಗುರುಗಳಾಗಿ ಜೈನಧರ್ಮದ ಪ್ರಸಾರಕ್ಕೆ ಕಾರಣವಾದರು. ಗಂಗರಸರ ಮಂತ್ರಿಯಾದ ಚಾವುಂಡರಾಯನು ಲೋಕೋತ್ತರವಾದ ಬಾಹುಬಲಿ ವಿಗ್ರಹವನ್ನು ಕೆತ್ತಿಸಿದನು.

ಜೈನಧರ್ಮದಲ್ಲಿ ಸಲ್ಲೇಖನ ವ್ರತವು: ಸಾಯುವವರೆಗೂ ಉಪವಾಸ ಮಾಡುವ ವ್ರತವಾಗಿದೆ. ಆಚಾರ್ಯ ಸಮಂತಭದ್ರರು ಸಲ್ಲೇಖನ ವ್ರತವನ್ನು ಹೀಗೆ ಹೇಳಿದ್ದಾರೆ. "ಮರಣವು ಅನಿವಾರ್ಯವಾದಾಗ ಯೋಗಿಗಳು ಈ ಸಲ್ಲೇಖನವ್ರತವನ್ನು ಆಚರಿಸಿ, ಶುಭ ಪರಿಣಾಮದಲ್ಲಿ ಸಮಾಧಿ ಮರಣವನ್ನು ಹೊಂದುತ್ತಾರೆ."[೪] ಕನ್ನಡ ಸಾಹಿತ್ಯಕ್ಕೆ ಜೈನಧರ್ಮದ ಕೊಡುಗೆ ಅಪಾರವಾದದ್ದು. ಪಂಪ, ಪೊನ್ನ, ರನ್ನ, ಚಾವುಂಡರಾಯ, ಶಾಂತಿನಾಥ, ನಾಗಚಂದ್ರ, ನಯಸೇನ, ಬ್ರಹ್ಮಶಿವ ಮುಂತಾದ ಹಲವಾರು ಕವಿಗಳು ಜೈನ ಧರ್ಮದವರಿಂದಾಗಿ ಕರ್ನಾಟಕದಲ್ಲಿ ತಮ್ಮದೆ ನೆಲೆಯನ್ನು ಹೊಂದಿದ್ದರೆ.

ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಜೈನರ ಕೊಡುಗೆ ಅಪಾರವಾದದ್ದು. "ಕದಂಬರು ಜೀನಾಲಯವನ್ನು ನಿರ್ಮಿಸಿದರು. ಐಹೊಳೆಯ ಮೇಗುತಿ ಜಿನಾಲಯ ಅಣ್ಣಿಗೇರಿಯ ಚೈತ್ಸಾಲಯ, ಪುಲಿಗೆರೆ ಶಂಖಬಸದಿ."[೫] ಇವು ಬಾದಾಮಿ ಚಾಳುಕ್ಯರ ಕಾಲದ ಕಟ್ಟಡಗಳಾಗಿವೆ. ಜೈನ ಮತ್ತು ಇತರೆ ಮತೀಯರ ನಡುವೆ ವಿವಾಹ ಸಂಬಂಧರೂಡಿಗೆ ಬಂದುದರಿಂದ ಕಾಲಾನುಕ್ರಮದಲ್ಲಿ ಅನ್ಯಮತಗಳ ಸ್ವೀಕಾರಕ್ಕೆ ನಾಂದಿ ಹಾಡಿದಂತಾಯಿತು. ನಂತರದ ಕಾಲದಲ್ಲಿ ಜೈನಮತದಲ್ಲಿನ ಕೆಲವರು ಧಾರ್ಮಿಕ ಒತ್ತಡ, ಸಂಘರ್ಷ, ಇನ್ನಿತರ ಕಾರಣಗಳಿಂದಾಗಿ ಅಸ್ತಿತ್ವಕ್ಕೆ ಬರುತ್ತಿದ್ದ ಪರಮತಗಳನ್ನು ಸ್ವೀಕರಿಸುವ ಸಂದರ್ಭ ಉಂಟಾಯಿತೆಂದು ಹೇಳಬಹುದು.

ಅನೇಕ ಬೌದ್ದ ಕಾರಣಗಳಿಂದಾಗಿ ಜೈನ ಧರ್ಮವು ಶೈವಧರ್ಮದೊಂದಿಗೆ ಸಂಘರ್ಷಗಳು ಉಂಟಾಗುವುದನ್ನು ಮುಂದಿನ ಪುಟಗಳಲ್ಲಿ ನೋಡಬಹುದಾಗಿದೆ. ಮೊದಲು ಜೈನರು ತಮ್ಮದೆ ಪ್ರಾಬಲ್ಯವನ್ನು ಹೊಂದಿದ್ದಾರೆ. ಇದಕ್ಕಿಂತ ಬೇರೆ ದೇವರಿಲ್ಲ ಜಿನನೆ ಸೃಷ್ಠಿಕರ್ತ ಎಂದು ನಂಬಿದ್ದರು. ಇದಕ್ಕೆ ಸಂಬಂಧಪಟ್ಟಹಾಗೆ ನಾವು "ಮೂರುಜಾವಿ ದೇವರ ಚರಿತ್ರೆಯಲ್ಲಿ ಜೈನರು ಉನ್ನತ ಸ್ಥಿತಿಯಲ್ಲಿ ಇದ್ದರೆಂದು ಹೇಳಲಾಗಿದೆ" ಅಂತರವಳ್ಳಿ ಗ್ರಾಮ ಆ ಭಾಗದಲ್ಲಿ ಶಂಖಪಾಲನೆಂಬುವನು ಪಾಳೆಗಾರ ಅಲ್ಲಿನ ಅರಸ ಬಿಜ್ಜಳ ಇವರೆಲ್ಲರೂ ಜೈನರಾಗಿದ್ದರಿಂದ ಜೈನರಿಗೆ ಹೆಚ್ಚಿನ ಹಮ್ಮಿತು. ಆ ಜನರಲಲ್ಲಿ ಜೈನರೆಂದರರೆ ಭಯವೂ ಇತ್ತು. ಇತರೆ ಮತಗಳಿಂದ ಜೈನಮತಕ್ಕೆ ಮತಾಂತರಗೋಳಿಸುವ ಪದ್ದತಿಯು ರೂಢಿಯಲ್ಲಿತ್ತು. ಆ ಕಾಲದಲ್ಲಿ ಇಡೀ ಊರೇ ಜೈನರಾಗಿದ್ದರು"[೬] ಎಂದು ಹೇಳಲಾಗಿದೆ. ಕರ್ನಾಕದಲ್ಲಿ ಉತ್ತಮ ಸ್ಥಿತಿಯಲ್ಲಿರುವ ಜೈನ ಧರ್ಮವು ಶೈವ, ವೈಷ್ಣವ, ವೀರಶೈವರ ದಾಳಿಗೆ ಸಿಕ್ಕಿ ತಮ್ಮ ಅಸ್ಥಿತ್ವವನ್ನು ಕಳೆದುಕೊಂಡವು, ಉದಾಹರಣೆ ಶೈವ ಮತ್ತು ಜೈನ ಸಂಘರ್ಷಗಳು ಏಕಾಂತರಾಮಯ್ಯ ಮತ್ತು ಆದಯ್ಯ

ಚಿತ್ರಣವನ್ನು ನೋಡಬಹುದು. ಜೈನ ಮತ್ತು ಶೈವರ ಸಂಘರ್ಷದಲ್ಲಿ ಜೈನರು ತಮ್ಮ ಅಸ್ಥಿತ್ವವನ್ನು ಕಳೆದುಕೊಂಡ ಬಗೆಯನ್ನು ಮುಂದಿನ ಪುಟಗಳಲ್ಲಿ ನೋಡಬಹುದು.

**೩.೨ ಅನೇಕಾಂತವಾದ:**

ಅನೇಕಾಂತವಾದ ಪದವು ಜೈನ ಧರ್ಮದಲ್ಲಿ ಹೆಚ್ಚು ಪ್ರಚಲಿತದಲ್ಲಿ ಕಂಡುಬರುತ್ತದೆ. ಜ್ಞೇಯವಸ್ತು ಅನೇಕಾಂತ ಸ್ವರೂಪಿಯಾಗಿದೆ. ಅಂದರೆ ಅದರ ಧರ್ಮಗಳು, ಗುಣಗಳು, ಅನೇಕಾಂತವಾಗಿವೆ. ಆ ಅನೇಕ ಧರ್ಮಗಳು ಒಂದೊಂದು ಸ್ವರೂಪದಲ್ಲಿ ಆ ವಸ್ತುವಿನಲ್ಲಿ ಇದ್ದು ಪರಸ್ಪರ ಒಂದರಿಂದ ಇನ್ನೊಂದು ಭಿನ್ನವಾಗಿದೆ. ಅನ್ಯಧರ್ಮಗಳ ಅಪೇಕ್ಷಯನ್ನು ಗಮನಿಸದೆ ಒಂದೇ ಧರ್ಮವನ್ನು ಗ್ರಹಣ ಮಾಡುವುದು ಏಕಾಂತವಾಗಿದೆ. ಅವುಗಳನ್ನು ಗೌಣ ಮತ್ತು ಮುಖ್ಯ ಭಾಗಗಳಿಂದ ಪರಸ್ಪರ ಸಾಪೇಕ್ಷತೆಯಿಂದ ತಿಳಿಯುವುದೇ ಅನೇಕಾಂತವಾಗಿದೆ. ಅಲ್ಲದೆ ವಸ್ತುವಿನ ಯಥಾರ್ಥಜ್ಞಾನ ಅನೇಕಾಂತವಾದದಿಂದಲೇ ಆಗುತ್ತದೆ.

ವಿಭಜ್ಯವಾದ ಅಥವಾ ಪೃಥಕ್ಕರಣಮಾಡಿ ವಿಭಜನೆಮಾಡಿ ಯಾವುದಾದರೊಂದು ತತ್ವವನ್ನು ವಿವೇಚಿಸುವವಾದ ಎಂದು ವಿವರಿಸುವುದು ಸಮರ್ಪಕವಾಗುವುದು. ಅಪೇಕ್ಷಾಭೇದದಿಂದ ವಸ್ತುಸ್ವರೂಪವನ್ನು ವಿವೇಚಿಸುವಾಗ ಸ್ಯಾತ್ ಶಬ್ದಕಿಂತ ಪ್ರಯೋಗ ಆಗಮಗಳಲ್ಲಿ ದೊರೆಯುತ್ತವೆ. ಸ್ಯಾತ್ ಶಬ್ದಕ್ಕೆ ಕಥಂಚಿತ್ ಕೆಲವು ದೃಷ್ಠಿಯಿಂದ ಹೀಗಿದೆ, ಹಲವು ದೃಷ್ಠಿಯಿಂದ ಹಾಗಿದೆ. ಈ ರೀತಿ ವಸ್ತುವಿನ ಅನೇಕ ಧರ್ಮ, ಗುಣಗಳ ದೃಷ್ಠಿಯಲ್ಲಿ ಗೌಣವಾಗಿಟ್ಟು ಕೆಲವೊಂದು ವಿಶೇಷಣಕ್ಕೆ ನಿತ್ಯವಿಶೇಷತ್ವ, ವಾಚ್ಯಾವಾಚ್ಯತ್ವ, ಸತ್ ಅಸತ್ ಇತ್ಯಾದಿ ವಸ್ತಗಳಿಗೆ ಗುಣಗಳು ಈ ಪ್ದತಿಯಲ್ಲಿ ಸ್ಪಷ್ಟವಾಗಿ ದೃಗ್ಗೋಚರವಾಗಿತ್ತವೆ. ಇದೇ ಅನೇಕಾಂತ ದೃಷ್ಟಿ. ಇದರಲ್ಲಿ ಏಕಾಂತಕ್ಕೆ ದುರಾಗ್ರಹಕ್ಕೆ ಆಸ್ಪದವಿಲ್ಲ. ಎಂದು ಹೇಳಬಹುದು.

ಈ ಅನೇಕಾಂತ ಮತವು ಅತ್ಯಂತ ಬುದ್ಧಿಶಾಲಿಗಳ (ಜ್ಞಾನಿಗಳ) ಮತವಾಗಿದೆ.

"ಅನೇಕಾಂತಮಯಂ ಯಸ್ಯ ಮತಿಮತಾಂ ಮತಂ!

ಸನ್ಮತಿಃ ಸನ್ಮರ್ತಿ ಕುರ್ಯಾತ್ ಸನ್ಮರ್ಪೋ ಜಿನೇಶ್ವರಃ!"[೭]

ಅಚಾರ್ಯ ಉಮಾಸ್ವಾವಿಯವರು ಹೇಳುವುದೇನೆಂದರೆ, 'ಅರ್ಪಿತಾನರ್ಪಿತಸಿದ್ದೇ' ಮುಖ್ಯತೆ ಮತ್ತು ಗೌಣತೆಯ ಅಪೇಕ್ಷಿಯಿಂದ ಒಂದೇ ವಸ್ತುವಿನಲ್ಲಿ ವಿರೋಧ ಎರಡು ಧರ್ಮಗಳು ಸಿದ್ಧವಾಗುತ್ತವೆ. ಪ್ರತಿಯೊಂದು ವಸ್ತುವು ಅನೇಕಾತ್ಮಕವಾಗಿದೆ.

ಜಿನಾಗಮ ಶಾಸ್ತ್ರದಲ್ಲಿ ವ್ಯವಹಾರ ಮತ್ತು ನಿಶ್ಚಯ ಇವೆರಡು ಧರ್ಮಚಕ್ರಗಳ ಮೇಲೆ ಆ ರೂಢವಾಗಿ ಯಥಾರ್ಥವಾದ ಮಾರ್ಗದರ್ಶನ ನೀಡುವಲ್ಲಿ ಅನೇಕಾಂತ ಮತವು ಸಮರ್ಥವಾಗಿದೆ. ಇದುವೆ ಜೈನ ಧರ್ಮದ ಮುಖ್ಯ ಸಿದ್ಧಾಂತವಾಗಿದೆ.

ಅನೇಕಾಂತವಾದ ಪದವು ಮೂರು ಪದಗಳಿಂದ ಕೂಡಿದೆ.

- ಅನೇಕ – ಅನೇಕದ ಅರ್ಥವು ಎಷ್ಟೋ ಅಥವಾ ಬೇರೆ ಬೇರೆ, ಒಂದಕ್ಕಿಂತ ಹೆಚ್ಚು ಎಂದಾಗುತ್ತದೆ.
- ಅಂತ– ಅಂತವು ಅರ್ಥವು, ಧರ್ಮ ಎಂದಾಗುತ್ತದೆ.
- ವಾದ– ವಾದದ ಅರ್ಥವು, ವಿವರಣೆ ಅಥಾವ ಕಥನ ಎಂದಾಗುತ್ತದೆ.

ಈ ಅನೇಕಾಂತವಾದವನ್ನು ಸಾಪೇಕ್ಷ ವಾದವೆಂದು ಕರೆಯುತ್ತಾರೆ.

"ಅನೇಕ ಅತಾಃ ಧರ್ಮಃ ಯಸ್ಯಾಸೌ ಅನೇಕಾಂತಃ ಯಾವುದರಲ್ಲಿ ಅನೇಕ ಅಂತ ಅರ್ಥಾತ್ ಧರ್ಮವು ದೊರೆಯುತ್ತದೆ, ಅದಕ್ಕೆ ಅನೇಕಾಂತವೆಂದು ಹೇಳಲಾಗಿದೆ"[೮]. ದಾರ್ಶನಿಕ ಜಗತ್ತಿನಲ್ಲಿ ಜೈನಧರ್ಮದ ಇತಿಹಾಸ ಕಂಡುಬರುತ್ತದೆ. ಹೇಗೆಂದರೆ, ಜೈನ ದರ್ಶನದ ತತ್ವಸಿದ್ಧಾಂತಗಳೆಲ್ಲ ಪ್ರಾಕೃತಿಕವಾಗಿದೆ. ದಯೆ ಪ್ರಾಣಿಮಾತ್ರದ ಪ್ರಾಕೃತಿಕ ಗುಣವಾಗಿದೆ. ಜೀವದಯೇ, ಅಂದರೆ ಅಹಿಂಸೆ ಜೈನಧರ್ಮದ ಉಸಿರಾಗಿದೆ.

"ಕಾಲ ಅನಾದಿಯಾಗಿದೆ, ಜೀವ ಅನಾದಿಯಾಗಿದೆ, ಕರ್ಮ ಅನಾದಿಯಾಗಿದೆ. ಕರ್ಮವನ್ನು ಕಟ್ಟಿಕೊಂಡು ಜೀವ, ಅಂತ, ಭವ ಸಂಸಾರದಲ್ಲಿ ಅನಾದಿಕಾಲದಿಂದಲೂ ತಿರುಗತ್ತಲೆ ಇದೆ. ಉತ್‌ಸರ್ಪಿಣಿ, ಅವಸರ್ಪಿಣಿಗಳೆಂಬ ಕಾಲ ವಿಭಾಗದ ಚಕ್ರದ ಗಾಲಿ ಒಂದೇ ಸಮನೆ ತಿರುಗತ್ತಲೇ ಇದೆ. ಭೂತ, ವರ್ತಮಾನ, ಭವಿಷತ್‌ಕಾಲ ಖಂಡಗಳು ಒಂದಾದ ಮೇಲೊಂದು ಬರುತ್ತವೆ, ಹೋಗುತ್ತವೆ."[೯]

ಜಿನಾಗಮದ ಅನುಸಾರ ವರ್ತಕಾಲದಲ್ಲಿ ಭಗವಾನ್ ಆದಿನಾಥರಿಂದ ಹಿಡಿದು ಮಹಾವೀರರ ವರೆಗೆ ೨೪ ತೀರ್ಥಕರರು ಅಹಿಂಸಾ ಧರ್ಮವನ್ನು ಅಂದರೆ ಜೈನಧರ್ಮವನ್ನು ಪ್ರಕಾಶನಗೊಳಿಸದ್ದಾರೆ. ಈ ಜಿನಾಗಮಕ್ಕೆ ಮೂಲಸಿದ್ಧಾಂತ ಒಂದು ಕಂಡು ಬರುತ್ತದೆ. ಅದೇ ಅನೇಕಾಂತ ಸಿದ್ಧಾಂತವಾಗಿದೆ. ಇದು "ಅನೇಕಾಂತಾತ್ಮಕವಾದ ವಸ್ತು ಸ್ವರೂಪವನ್ನು ಪ್ರತಿಪಾದಿಸುತ್ತದೆ. ವಸ್ತು ಸ್ವರೂಪವು ಎಂದಿಗೂ ಅದು ಪರಿವರ್ತನವಾಗುತ್ತಲೆ ಇರುತ್ತದೆ. ಅದು ನಾಶವಾಗುವುದಿಲ್ಲ, ಅರ್ಥಾತ್ ರೂಪಾಂತರವಾಗುತ್ತದೆ."[೧೦]

ಅನೇಕಾಂತವಾದ ಸಿದ್ಧಾಂತವು ಜೈನಧರ್ಮದಷ್ಟೇ ಪ್ರಾಚೀನವಾಗಿದೆ ಎಂದು ಹೇಳಬಹುದು. ಅಂತಿಮ ಸತ್ಯ ಒಂದಕ್ಕಿಂತ ಹೆಚ್ಚನದಲ್ಲ ಎಂದು ಏಕತ್ವವಾದ ಹೇಳಿದರೆ, ಅನೇಕಾಂತವಾದ ಸತ್ಯ ಒಂದೇ ಅಲ್ಲ ಎರಡಿರಬಹುದು ಅಥವಾ ಇನ್ನೂ ಅನೇಕ ಇರಬಹುದು ಎಂಬ ವಾದವನ್ನು ಪ್ರತಿಪಾದಿಸುತ್ತದೆ.

**೩.೩. ಏಕಾಂತ ರಾಮಯ್ಯನ ಪವಾಡ**

ಅಬ್ಬಲೂರು ಚರಿತೆಯಲ್ಲಿ ಬರುವ ಏಕಾಂತ ರಾಮಯ್ಯನು, ತಮ್ಮ ಶೈವಧರ್ಮದ ಉಳಿವಿಗೋಸ್ಕರ ತನ್ನ ತಲೆಯನ್ನು ಪಣವಾಗಿಟ್ಟು ತನ್ನ ಶೈವಧರ್ಮವನ್ನು ಎತ್ತಿ ಹಿಡಿದು ಕೀರ್ತಿಯನ್ನು ಹೊಂದಿ ಪ್ರಖ್ಯಾತನಾದನು. ಏಕಾಂತ ರಾಮಯ್ಯನು ಮೂಲತ: ಕಾಳಮುಖ ಪರಂಪರೆಯವನು ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಕಾಳಾಮುಖ ಪರಂಪರೆಯು ಪ್ರಬಲವಾಗಿತ್ತು. ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಗುಲ್ಬರ್ಗಾ ಜಿಲ್ಲೆಯ ಭಾಗದಲ್ಲಿ ಅಭಿನವ ಪಾಶುಪಥ

ಅಥವಾ ಲಾಕುಳ ಹೊಸ ಸಮಯ ಎಂಬ ಪಂಥವೊಂದು ಲಕುಲೀಶ ಪಾಶುಪಥನೇ ಆಗಿದ್ದಾನೆಂದು, ಬಹುಶಃ ಇವರಲ್ಲೇ ಉಗ್ರ ಶಿವಭಕ್ತ ವೀರಶೈವವೆಂದು ರೂಪ ತಳೆದಿರಬಹುದು. ಅವರೆಲ್ಲ ವಚನಕಾರರ ಜೊತೆ ಸಂಬಂಧ ಹೊಂದಿರುವರೆಂದು ಕಾಳಾಮುಖ ಹೊರಗೆ ವಿಭಿನ್ನ ಶೈವಪ್ರಭೇದಗಳು ಬೆಳೆದಿದ್ದವು. ವೀರಶೈವ ಕವಿಗಳು ಸಂಪಾದನಾಕಾರರು ಏಕಾಂತ ರಾಮಯ್ಯನನ್ನು ವೀರಶೈವ ಧರ್ಮದ ಮಹಾಭಕ್ತನಂತೆ ಚಿತ್ರಿಸುತ್ತದೆ ಎಂದು ಎಂ.ಎಂ. ಕಲಬುರ್ಗಿ ಅವರು ಅಭಿಪ್ರಾಯಪಟ್ಟಿದ್ದಾರೆ.

ಏಕಾಂತ ರಾಮಯ್ಯನ ತಂದೆ ತಾಯಿಗಳಾದ ಪುರುಷೋತ್ತಮ ಮತ್ತು ಪದ್ಮಾಂಬಿಕೆ ಅಳಂದೆ ಇಂದ ಅಬ್ಬಲೂರಿಗೆ ಬರುತ್ತಾರೆ. ಇವರಿಗೆ ಅನೇಕ ವರ್ಷ ಮಕ್ಕಳಾಗಿರವುದಿಲ್ಲ. ನಂತರ ಶಿವನ ಒಂದು ಅಂಶವಾದ ವೀರಭದ್ರನು ಪುರುಷೋತ್ತಮ ಭಟ್ಟರ ಕನಸಿನಲ್ಲಿ ಬಂದು ಜೈನರನ್ನು ಬಗ್ಗುಬಡೆಯುವ ಒಬ್ಬ ಮಗ ನಿಮಗೆ ಹುಟ್ಟುತ್ತಾನೆಯೆಂದು ವರ ನೀಡಿ ಹೊಗುತ್ತಾನೆ. ವರದಂತೆ ಪಡೆದ ಮಗನಿಗೆ ಪುರುಷೋತ್ತಮ ಭಟ್ಟರು ರಾಮನೆಂದು ಹೆಸರಿಟ್ಟರು. ನಂತರ ಅವನ ಏಕಾಂತ ಚಿತ್ತ ಭಕ್ತಿಯನ್ನು ಕಂಡು ಏಕಾಂತ ರಾಮಯ್ಯನೆಂದು ಹೆಸರನ್ನು ಪಡೆದನು. ಇವನು ಒಬ್ಬ ಸಂಚಾರಿಯಾಗಿ ಕಂಡು ಬರುತ್ತಾನೆ. ಶಿವನನ್ನು ಧ್ಯಾನಮಾಡುತ್ತಾ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸುತ್ತ ಏಕಾಂತ ರಾಮಯ್ಯನು ದಕ್ಷಿಣ ಸೋಮನಾಥನ ವಾಸಸ್ಥಾನವಾದ ಪುಲಿಗೆರಿಗೆ ಬಂದು ಅಲ್ಲಿ ಸೋಮೇಶ್ವರನನ್ನು ಪೂಜಿಸುತ್ತಿರುವ ಸಮಯದಲ್ಲಿ ಶಿವನು ಪ್ರತ್ಯಕ್ಷನಾಗಿ ರಾಮನನ್ನು ನನ್ನ ಆಜ್ಞೆಯಂತೆ ಅಬ್ಬಲೂರಿಗೆ ಹೊಗು. ಅಲ್ಲಿ ಪೂಜೆಮಾಡಿಕೊಂಡಿರು ಜೈನರಲ್ಲಿ ಕಲಹ ಉಂಟಾದಾಗ ಯಾವುದೇ ಹಿಂಜರಿಕೆ ಇಲ್ಲದೆ ತಲೆಯನ್ನು ಫಣಕ್ಕೆ ಇಟ್ಟು ಜಯಶಾಲಿಯಾಗು ಅದರಂತೆ ಏಕಾಂತ ರಾಮಯ್ಯನು ಅಬ್ಬಲೂರಿಗೆ ಬರುತ್ತಾನೆ.

ಏಕಾಂತ ರಾಮಯ್ಯನು ಶೈವಮತದ ಉದ್ಧಾರಕ್ಕಾಗಿ ತನ್ನ ಕೈಯಾರೆ ಶಿರಸ್ಸು ಪವಾಡ ಮಾಡಿಕೊಂಡ ಘಟನೆಯು ಶಾಸನ, ಕಾವ್ಯ, ಪುರಾಣಗಳಲ್ಲಿ ಭಿನ್ನತೆಯಿಂದ ಕೂಡಿದ್ದರು ಮೂಲ ಉದ್ದೇಶ ಒಂದೆ ಯಾಗಿದೆ. ಅಬ್ಬಲೂರು ಶಾಸನದಲ್ಲಿ ಜೈನರ ನಾಯಕನಾದ ಸಂಕಗೌಡನು ಜೈನರೊಂದಿಗೆ ರಾಮಯ್ಯನಿದ್ದ ಬ್ರಹ್ಮೇಶ್ವರ ದೇವಾಲಯದಲ್ಲಿಗೆ ಬಂದು ಜಿನನೆ ದೊಡ್ಡವನೆಂದು ವಾದಮಾಡುತ್ತಾ ಜಿನ ಪಾರಮ್ಯವನ್ನು ಘೋಷಿಸಿದ್ದು ಕಾರಣವಾದರೆ, “ಹರಿಹರನ ರಗಳೆಯಲ್ಲಿ ರಾಮಯ್ಯನು ಬ್ರಹ್ಮೇಶ್ವರ ದೇವಾಲಯವನ್ನು ಪ್ರವೇಶಿಸಿದಾಗ ಹರನತ್ತ ಕಾಲಾಗಿ ಪಟ್ಟಿರೆ ಸವಣ ಗುನ್ನಿಯನ್ನು ಕಂಡಿದ್ದು ಕಾರಣವಾಗುತ್ತದೆ. ಬಸವ ಪುರಾಣದಲ್ಲಿ ರಾಮಯ್ಯನು ಶೈವಕ್ಷೇತ್ರಗಳನ್ನು ಸಂದರ್ಶಿಸುತ್ತ ಅಬ್ಬಲೂರಿಗೆ ಬಂದಾಗ ‘ಪಿನಾಕಿ ಭವನವನೊರ್ಬ ಜೈನನು ಕೆರಹುಗಾಲಿನಿಂದ ಪ್ರವೇಶಿಸಿದ್ದು’ ಕಾರಣವಾಗುತ್ತದೆ. ಸಿದ್ದೇಶ್ವರ ಪುರಣದಲ್ಲಿ, ದಿನಕರರೋದಯದಲ್ಲಿ ಜೈನನೋರ್ವನು ಬಂದು ‘ಚನುಮಯ್ಯ ಕಡೆಗತಿಯ ನೀಡಿಕೊಂಡಿರುವುದನ್ನು ಕಂಡಿದ್ದು ಕಾರಣ ವಾಗುತ್ತದೆ. ಬಸವರಾಜ ವಿಜಯದಲ್ಲಿ ‘ಜಿನಭಜಕನಾ ಗುಡಿಯನೊಯ್ಯನೆ ಕೆರ್ಪಂ ತಾಳ್ದಂ ಕಾಲ್ಗಳಿಂದೊಳ ಪೊಕ್ಕುದ ಕಾರಣವಾಗುತ್ತದೆ.’ ಅಬ್ಬಲೂರು ಚರಿತೆಯಲ್ಲಿ ರಾಮಯ್ಯನು ಅಬ್ಬಲೂರಿಗೆ ಬಂದು ಪಾಳು ಬಿದ್ದಿದ್ದ ಬ್ರಹ್ಮೇಶ್ವರ ದೇವಾಲಯವನ್ನು ಸ್ವಚ್ಛಮಾಡಿ ಬ್ರಹ್ಮೇಶ್ವರನನ್ನು ಪೂಜಿಸುತ್ತಿರುವಾಗ ಅಲ್ಲಿಗೆ ಬಂದ ಜೈನರು

ವಾಸಿಗಳಾಗಿರ ಬೇಡಿರಿ ಗುಡಿಯೊಳು ದೋಷ ಬಪ್ಪುದು' ಎಂದು ಶಿವನಿಂದನೆಯನ್ನು ಮಾಡುವುದು ಕಾರಣವಾಗುತ್ತದೆ. ಈ ಹೇಳಿಕೆಗಳನ್ನು ಗಮನಿಸಿದರೆ. ಶೈವಮತಕ್ಕಿಂತ ಹಿಂದೆಯೇ ಜೈನ ಧರ್ಮವೇ ಶ್ರೇಷ್ಠ ಎಂದು ಜೈನರು ವಾದಿಸಿರುವುದು ಗಮನಕ್ಕೆ ಬರತ್ತದೆ. ಅಲ್ಲದೆ ಇಲ್ಲಿ ಅಬ್ಬಲೂರಿನಲ್ಲಿ ಜೈನರ ಪ್ರಭುತ್ವ ವಿರುವುದನ್ನು ನೋಡಬಹುದು.[೧೧] ಇಲ್ಲಿ ಶೈವಧರ್ಮದ ಉಳಿವಿಗಾಗಿ ಏಕಾಂತ ರಾಮಯ್ಯನಿಗೂ ಮತ್ತು ಜೈನರ ನಾಯಕನಾದ ಸಂಕಗೌಡನಿಗೂ ಮೊದಲು ಆಂತರಿಕ ಜಗಳ ಉಂಟಾಗಿ ಜಿನ ಮತ್ತು ಶಿವನನ್ನು ಮೆಚ್ಚಿ ಕೊಳ್ಳುವುದನ್ನು ಶಾಸನದಲ್ಲಿ ನೊಡಬಹುದಾಗಿದೆ.

ಜೈನರ ನಾಯಕ ಸಂಕಗೌಡನು ಜಿನನೆ ದೇವರೆಂದು ಅವನ ಎದುರಿನಲ್ಲಿ ರಾಮಯ್ಯನನ್ನು ಕೆಣಕಿದನು. ಶಿವನ ಸನ್ನಿಧಿಯಲ್ಲಿ ಅನ್ಯದೈವವನ್ನು ಹೊಗಳಲಾಗದು. ಹೋಗಿ ಎಂದು ರಾಮಯ್ಯನು ಹೇಳಿದರು ಕೇಳದೆ ವಾದಮಾಡುತ್ತಾನೆ. ನಂತರ ಜಗತ್ತನ್ನು ಸೃಷ್ಠಿಮಾಡುವವನು, ಆಪಾತ್ಕಾಲದಲ್ಲಿ ಕಾಪಾಡುವವನು, ಕೋಪಬಂದರೆ ಸಂಹಾರ ಮಾಡುವವನು, ಶಂಭು! ಅವನಿರುವಾಗ ಬೇರೆ ಬೇರೆ ಜನ್ಮಗಳಲ್ಲಿ ಸಂಸಾರದ ಸಂಕಟದಲ್ಲಿ ಸಿಲುಕಿ ಕೊನೆಗೆ ತಪಸ್ಸಿಗೆ ಹೋಗಿ ಸುಖವನ್ನು ಪಡೆದ ಜಿನನೆ ದೇವನೆ ಎಂದು ರಾಮಯ್ಯನನ್ನು ಟೀಕಿಸಿದನು. ನಮ್ಮ ಶಿವನಂತೆ ನಿಮ್ಮ ಅರ್ಹರಿತನು ವರಕೊಡುತ್ತಾನೆಯೇ ಹಿಂದೆ ಅನೇಕ ಶಿವ ಭಕ್ತರು ಶಿವನಿಂದ ವರಗಳನ್ನು ಪಡೆದ್ದಿದ್ದಾರೆ ಎಂದ. ಆಗ ಜೈನರು ಹಿಂದಿನವರ ಕಥೆಯನ್ನು ಹೇಳುವುದೇಕೆ ನಿನ್ನ ತಲೆಯನ್ನು ಕಡಿದು, ಶಿವನಿಂದ ಮತ್ತೆ ತಿರುಗಿ ಪಡೆದರೆ ನೀನೆ ಭಕ್ತ ಅವನೇ ದೇವರು ಎಂದು ಸವಾಲು ಹಾಕಿದರು.

'ನಿಮ್ಮಯ ಸಿರಮಂ ಜನ ಮರಿಯಲರಿದು ಕೊಟ್ಟಾ ತನೂಳಿಂ ಪಡೆ ನೀನೆ ಭಕ್ತನಾತನೇ ದೇವಂ.......

ಎನಲೇ ಕಾಂತದ ರಾಮಂ
ಮಾನಸಿಜರಿಪುಗಿತ್ತು ತಲೆಯ ನಾ ಪಡೆದಡೆ ನೀ
ವೆನಗೀವ ಪಣಮದೇನೆನೆ
ಮುನಿದೆಂದರ್ ಜಿನನ ಕಿತ್ತು ಶಿವನಂ ನಿಲಿಪೆವು. [೧೨]

ಇನ್ನೂ ಹರಿಹರನ ರಗಳೆಯನ್ನು ಗಮನಿಸುವುದಾದರೆ.

"ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ
ಕೆಲರರಿಯೆ ಹಿಂದಾದ ಹಳೆಯ ಮಾತುಗಳೇಕೆ
ಇಂದೆನ್ನ ಮುಂದೆ ನಿನ್ನಯ ತಲೆಯನರಿದು ಹಡೆ
ಸಂದುದು ಬಳಿಕ್ಕನುಡಿಯಾವೆಲ್ಲರು ನೋಡೆ
ಪಡೆಯ ಜಿನನ ಪ್ರತಿಮೆಗಳ ನೆತ್ತಿ ಬಿಸಾಡುವೆವು
ನಡುವೆ ಶಿವಲಿಂಗ ಪ್ರತಿಷ್ಠೆಯಂ ಮಾಡುವೆವು".[೧೩]

ಎಂದು ಜೈನರರಲ್ಲು ರಾಮಯ್ಯನು ಒಪ್ಪಿ ಅಗ್ಗಣಿಯ ಹೊನ್ನಿ ತಂದೆ. ಜೈನರ ಸಮ್ಮುಖದಲ್ಲಿ ಓಲೆಯನ್ನು ಅಥವಾ ಪತ್ರವನ್ನು ಬರೆಸುತ್ತಾನೆ.

ಬಸವ ಪುರಾಣದಲ್ಲಿ, ಜೈನರ ಕುರಿತು.

"ದೇಗುಲ ಬಸತಿಯೆ ಜಿನನೆ ತಾಂ

ಮೇಗೆ ದೈವಲ್ಲದಡೆ ಕೇಳ್

ಹೇಗೆ ಭಕ್ತಾ ನಿನ್ನ ಮಸ್ತಕವಂ ಪರಿದು ಕೊಂಡು

ನಾಗ ಕಂಕಣನಿಂದೆ ಪಡೆ ದಿಟ

ವಾಗಿ ಭಕ್ತನು ನೀನೆ ಜಗದೊಳು

ಭೋಗ ಮೋಕ್ಷಗಳಿಗೆ ಶಿವನೇ ದೈವವಹುದೆನಲು"[೧೪]

ನಂತರ ರಾಮಯ್ಯನು ಶಿರವನರಿವೆನು ಮಾತನ್ನು ಪ್ರತಿಪಾಲಿಸುವೆನು ಎಂದು ಒಪ್ಪಿಕೊಳ್ಳುತ್ತಾನೆ. ವೀರಶೈವಾಮೃತ ಮಹಾಪುರಾಣದಲ್ಲಿ ರಾಮಯ್ಯನು ಬ್ರಹ್ಮೇಶ್ವರ ದೇವಾಲಯದಲ್ಲಿ ಶಿವನತ್ತ ಕಾಲು ಚಾಚಿರುವ. ಸವಣನನ್ನು ಕುರಿತು 'ಹೊಲೆ ಸವಣ ಹುಳಿತ ಕಾಲ್ತೆಗೆ ಎನಲು, ಆತನು ಶಿರವನ್ನು ಪರಿದು ಪಡೆಯನೆ ನಿನ್ನ ಸಮಯಯವಂ ಬಲಿಸೆಂದು ಊರಿನರಸ ಮತ್ತು ಪ್ರಮುಖ ಜೈನರೊಡನೆ ವಾದಕ್ಕೆ ನಿಲ್ಲುತ್ತಾನೆ. ಇದಕ್ಕೆ ಪ್ರತಿಯಾಗಿ ರಾಮಯ್ಯನು ಒಪ್ಪಿ ಪುಲಿಗೆರೆಯ ಹೊನ್ನಿ ತಂದೆಗಳು, ಪೈಚಿ ತಂದೆಗಳು, ಬಾಗಿಯ ಬಂಕದೇವಯ್ಯ, ಜಂಬೂರ ಮಹಾ ಕಾಳ ತಂದೆ, ಅಣ್ಣಿಗೆರಿಯ ದೇವರಪ್ಪಣ್ಣ, ಅಗ್ಗಳೆಯ ದೇವರಸ, ಕಲ್ಲಿನಾಥ, ಭಿಮಯ್ಯ ಮುಂತಾದ ವೀರಮಹೇಶ್ವರರ ಸಮ್ಮುಖದಲ್ಲಿ ಓಲೆಯ ಪತ್ರವನ್ನು ಬರಿಸುತ್ತಾನೆ. ಅಬ್ಬಲೂರಿನ ಚರಿತ್ರೆಯಲ್ಲಿ ಜೈನರು ರಾಮಯ್ಯನಿಗೆ

'ಇಂದು ಧರನ ಭಕ್ತನಾದರೇ ಎಲೆ ರಾಮ

ಕಂಧರಗತ್ತರಿಯನ್ನು

ಹೊಂದಿಸು ಶಿರಕೆ ಜಿಗಿದು ಬೀಳಲಿ ತಲೆ

ಎಂದರು ಶ್ರಾವಕರೆಲ್ಲ

ಏಳು ತೀರ್ಥವ ನೇಳುದಿನದೊಳು ಚರಿಸ

ಏಳುಲಿಂಗಕ್ಕೆ ನಿನ್ನ ಶಿರದಾರನೆಯನೆತ್ತಿ

ಏಳು ದಿನದಿ ಬಂದು ಹತ್ತೆ

ಆಳಾಗಿ ಯಿಹಲೆಮ್ಮ ಪಡೆ ಜಿನ ಮೂರ್ತಿಯ

ಹಾಳು ಮಾಡೆಂದು......'[೧೫]

ಏಕಾಂತ ರಾಮಯ್ಯನನ್ನು ಕುರಿತು ಬಹುತೇಕ ಶಾಸನ-ಕಾವ್ಯಗಳಲ್ಲಿ ಏಕಾಂಗಿಯಾಗಿ ರಾಮಯ್ಯನು ಜೈನರೊಡನೆ ವಾದ ಮಾಡಿ ಪಣವನ್ನು ಒಡ್ಡುತ್ತಾನೆ. ಎಂಬ ಅಂಶ ಕಂಡುಬಂದರೆ, ಹರಿಹರನ ರಗಳೆ ಮತ್ತು ವೀರಶೈವಾಮೃತ ಮಹಾಪುರಾಣದಲ್ಲಿ ರಾಮಯ್ಯನು ಜೈನರೊಡ್ಡಿದ ಸವಾಲನ್ನು

ಸ್ವೀಕರಿಸಿ ಓಲೆಯನ್ನುಬರೆಸುವಾಗ ಸಂಮ್ಮುಖದಲ್ಲಿ ಶರಣರು ಇದ್ದರು ಎಂಬ ಹೇಳಿಕೆ ಇದೆ. ಅಬ್ಬಲೂರು ಚರಿತದಲ್ಲಿ ಮೊಟ್ಟಮೊದಲ ಬಾರಿಗೆ ಈಸನ್ನಿವೇಶದಲ್ಲಿ ರಾಮಯ್ಯನ ಪರವಾಗಿ ಅಗ್ಗಣಿಯ ಹೊನ್ನಯ್ಯರು, ಜೈನರ ಪರವಾಗಿ ಗೊಮ್ಮಟದೇಶದ ಜೈನ ಗಣಗಳ ಗುರುಹಿರಿಯರು ಇದ್ದರು ಎಂದು ತಿಳಿಯಬಹುದಾಗಿದೆ.

ಅಬ್ಬಲೂರು ಶಾಸನದಲ್ಲಿ, ಓಲೆಯನ್ನು ಬರೆಸಿಕೊಂಡ ರಾಮಯ್ಯನು ತನ್ನ 'ಸ್ವ ಖಡ್ಗದಿಂದ.. ಚಕ್ಕನೆ ಹುಲ್ಲಕಟ್ಟನರಿವಂತೆ ದಿಂದಾಗಳಂ ತರಿದೀಶಾಂಘ್ರಿಯೊಳಿಕ್ಕಿ ಶಂಕರ ಗಣಕ್ಕಾನಂದಮಂ ಮಾಡಿದಂ"[೧೬] ಎಂದು ಹರಿಹರನ ರಗಳೆಯಲ್ಲಿ ಕಂಡುಬರುತ್ತದೆ.

'ಈ ಶಿರವನರಿದು ಹತ್ತಿಸಿ ಶಿವನೊಲಿಸುವೆಂ

ಸಾಸಿರ ಜಿನರೊಡೆದು ಲಿಂಗಮಂ ನಿಲಿಸುವೆಂ'

ಎಂದು ಅಲಗಿನಿಂದ ಶಿರವನ್ನು ಕತ್ತರಿಸಿಕೊಂಡ ಎಂಬ ವಿವರವಿದೆ.[೧೭]

ಬಸವ ಪುರಾಣದಲ್ಲಿ ಕಂಡುಬರುವ ಅಂಶವೆಂದರೆ 'ಶಿರವನಿತ್ತ ಭವಂಗೆ ಕಟಕದೊ ಳರಿದೆನಿಸಿ ಏಳ್ದಿನ ಮೆರೆದು ತಾಂ ಮರಳಿ ಮಸ್ತಕವಂ ಪಡೆದನೇ. ಎಂದು ಬಸವ ಮುಂತಾದ ಶಿವಶರಣರು ಮತ್ತು ಬಿಜ್ಜಳನ ಎದುರಲ್ಲಿ ಕಲ್ಯಾಣದಲ್ಲಿ ತನ್ನ ಶಿರವನ್ನು ಅಲಗಿನಿಂದ ಕತ್ತರಿಸಿಕೊಂಡನೆಂಬ ಉಲ್ಲೇಖ ಕಂಡುಬರುತ್ತದೆ.

ಪಾಲ್ಕುರಿಕೆ ಸೋಮನಾಥ, 'ಸೋಮೇಶ್ವರ ಪುರಾಣದಲ್ಲಿ ಖಡ್ಗವ ಜಡಿದು ಶಿರವನರಿದ' ಎಂಬ ವಿವರವಿದೆ. ಅಬ್ಬಲೂರು ಚರಿತದಲ್ಲಿ ರಾಮಯ್ಯನು ತನ್ನ ಶಿರವನ್ನು ಗಂಡಗತ್ತರಿ(ಕಂದಕತ್ತರಿ) ಯಿಂದ ಕತ್ತರಿಸಿಕೊಂಡ ಎಂದು ಹೇಳಿದೆ. ಶಿವಶರಣರು ವೀರ ಮರಣವನ್ನು ಹೊಂದಲು ಬಳಸುತ್ತಿದ್ದ ಆಯುಧ ಪ್ರಕಾರವಾದ ಗಂಡಗತ್ತರಿಯ ಉಲ್ಲೇಖ ಈ ಕೃತಿಯಲ್ಲಿದೆ. ಏಕಾಂತ ರಾಮಯ್ಯನು ತನ್ನ ಪವಾಡ ಸಾದೃಶ ಕಾರ್ಯದಲ್ಲಿ ಬಳಸಿದಲೆನ್ನಲಾದ ಗಂಡಗತ್ತರಿ ಆಯುಧವನ್ನು ನಾಟಯ್ಯ ನೆಂಬುವನು ಬಳಸಿದನೆಂಬುದು ಚನ್ನಬಸವಪುರಾಣದಲ್ಲಿ ವ್ಯಕ್ತವಾಗುತ್ತದೆ.

"ಗಂಡಗತ್ತರಿಯ ನಾಚಂ ಶಿವನ ನಿಂದಸಲ್

ತುಂಡು ತುಂಡಾಗಿ ಕಡಿಯಲ್ಕೆ ಪರ ಸಮಯದವ

ರಂಡಲೆದು ಮತ್ತೆ ತಲೆಯಂ ಗಂಡಗತ್ತರಿಗೆ ಕೊಡೆ ರಾಚಮಲ್ಲಯ್ಯನ

ಕೊಂಡು ತಾಳವ ನೊತ್ತೆ ಚಿಕ್ಕರಾಚಮಲ್ಲನು

ದ್ದಂಡದಿಂ.. ಪಾಡಲಿಪ್ಪತ್ತ್ಯದು ಲೀಲೆಯಿಂ

ಮುಂಡಮುರೆ ಕುಣಿದಾಡಿ ಮತ್ತೆ ಶಿರಮಂ ಪಡೆದು

ದೇನೆಂ ಬೆನಚ್ಚರಿಯನ"[೧೮]

ನಂತರ ಏಕಾಂತ ರಾಮಯ್ಯನು ಶೈವಮತದ ಹಿರಿಮೆಯನ್ನು ಎತ್ತಿ ಹಿಡಿಯಲು ಅನುಸರಿಸಿದ ವೀರ ಮಹೇಶ್ವರ ನಿಷ್ಠೆಯು ಗುಣಾಚಾರ ತತ್ವವನ್ನು ಪ್ರತಿಬಿಂಬಿಸಿದೆ. ಶಿರವನ್ನು ಕಡಿದು ಪುನಃ ಮುಂಡಕ್ಕೆ ಅಂಟಿಸಿ ಪ್ರಾಣ ಪಡೆಯುವ ಅದ್ಭುತ ಸಂಗತಿಯು ಜನಪದ ಗೀತೆಯಲ್ಲಿಯೂ ದೊರೆಯುತ್ತದೆ.

ಏಕಾಂತದ ರಾಮಯ್ಯನ ಶಿರವನ್ನು ಹೊನ್ನ ಹರಿವಾಣದಲ್ಲಿಟ್ಟುಕೊಂಡು ಏಳು ಕ್ಷೇತ್ರಗಳಿಗೆ ಹೊರಡುವ ಚಿತ್ರಣದಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ, ಅಬ್ಬಲೂರು ಶಾಸನದಲ್ಲಿ ರಾಮಯ್ಯನ ಶಿರವನ್ನು ಹೊತ್ತುಕೊಂಡು ಶೈವ ಕ್ಷೇತ್ರಗಳನ್ನು ಸಂದರ್ಶಿಸಿದ ವ್ಯಕ್ತಿಯ ಬಗ್ಗೆ ಉಲ್ಲೇಖವಿಲ್ಲ. ಆದರೆ ಮೂರು ಜಾವಿದೇವರ ಚರಿತೆಯಲ್ಲಿ ಪುಲಿಗೆರೆ ಹೊನ್ನಯ್ಯನವರು ಏಕಾಂತ ರಾಮಯ್ಯನ ಶಿರವನ್ನು ಏಳು ಕ್ಷೇತ್ರಗಳದರ್ಶನಕ್ಕೆ ಹೋಗುತ್ತಾರೆ. 'ಹರಿದ ತಲೆಯೇಳು ದಿವಸಂ ಬರೆಗಂ ಮೆರೆದಿಂ ವಿತ್ತಂ' ಎಂದಿದೆ. ಅಲ್ಲದೆ ಹರಿಹರನ ರಗಳೆಯನ್ನು ಗಮನಿಸುವುದಾದರೆ. ಹೊನ್ನ ತಂದೆ ಅಗ್ಗಳೆಯ ದೇವರಸರು ಮತ್ತು ಇತರೆ ಶರಣ ಗಣಗಳ ಜೊತೆ ರಾಮಯ್ಯನ ರುಂಡವನ್ನು ಹೊನ್ನ ಹರಿವಾಣದಲ್ಲಿಟ್ಟುಕೊಂಡು ಪುಲಿಗೆರೆಯ ಸೋಮನಾಥ. ಅಣ್ಣಿಗೆರಿಯ ಅಮೃತನಾಥ, ಕೆಂಬಾವಿಯ ಭೋಗನಾಥ, ಕಪ್ಪಡಿಯ ಸಂಗಮೇಶ್ವರ, ಆವುಂದದ ನಾಗನಾಥ (ಈಗಿನ ಮಹಾರಾಷ್ಟ್ರ ರಾಜ್ಯದ ಪರಳಿ ಜಿಲ್ಲೆಯಲ್ಲಿರುವ ಔಂಡ್‌ನ ನಾಗನಾಥೇಶ್ವರ) ಸೊನ್ನಲಿಗೆ ಜಗದ್ಗುರು ಸಿದ್ಧರಾಮ, ಹಂಪೆಯ ವೀರುಪಾಕ್ಷ ಮೊದಲಾದ ಶಿವಪುರ ವೆಲ್ಲರೊಳು ಏಳು ದಿವಸ ಮರೆಸಿ ಅಬ್ಬಲೂರು ಚರಿತೆಗಳಲ್ಲಿ ಶೈವಕ್ಷೇತ್ರಗಳಾಗಿದ್ದಿಂತೆ ಕಂಡು ಬರುತ್ತದೆ. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯಕ್ಕೆ ತರುತ್ತಾರೆ. ಈ ಕ್ಷೇತ್ರಗಳು ಆಗಿನ ಕಾಲಕ್ಕೆ ಪ್ರಸಿದ್ಧ ಶೈವಕ್ಷೇತ್ರಗಳಾಗಿದ್ದಂತೆ ಕಂಡುಬರುತ್ತದೆ. ಅಬ್ಬಲೂರು ಚರಿತೆಗಳಲ್ಲಿ ಶೈವಕ್ಷೇತ್ರಗಳ ಉಲ್ಲೇಖಬಂದಿದೆ ಇಂದಿಗೂ ಈ ಕ್ಷೇತ್ರವನ್ನು ಗುರುತಿಸಬಹುದಾಗಿದೆ.

ರಾಮಯ್ಯನ ಪವಾಡ ಸದೃಶ ಕಾರ್ಯಕ್ಕೆ ನೆರವಾದ ವ್ಯಕ್ತಿಗಳು ಎಂದರೆ ಅಬ್ಬಲೂರಿನ ಶಾಸನದಲ್ಲಿ ರಾಮಯ್ಯನ ಪವಾಡ ಸಾದೃಶ ಕಾರ್ಯಕ್ಕೆ ನೆರವಾದ ಚಿಕ್ಕೇಶ್ವರ ಗುರುವಿನ ಪ್ರಸ್ತಾಪ ಇಲ್ಲ. ಏಕಾಂತ ರಾಮಯ್ಯ ರುಂಡವನ್ನು ಹೊನ್ನಹರಿವಾಣದಲ್ಲಿಟ್ಟುಕೊಂಡು ಶೈವಕ್ಷೇತ್ರಗಳನ್ನು ಸಂದರ್ಶಿಸಿ ಹೊತ್ತುತಂದ ಹೊನ್ನಿತಂದೆಗಳು ಅಂತರವಳ್ಳಿಯಲ್ಲಿದ್ದ ಪಂಚಬ್ರಹ್ಮ ಮತದ ಚಿಕ್ಕೇಶಯತಿ'ಯನ್ನು ಕಾಣುತ್ತಾರೆ. ಅಲ್ಲಿ ರಾಮಯ್ಯನ ಪಣದ ವಿವರವನ್ನು ತಿಳಿಸಿ, ಈ ದಿನ ಕೋನೆಯದಿನ ಅಸ್ತಂಗತ ನಾಗುವ ಸೂರ್ಯನನ್ನು ತಡೆದು ಈ ಕಾರ್ಯದಲ್ಲಿ ರಾಮಯ್ಯನನ್ನು ಜಯಶೀಲನಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತಾರೆ. ಚಿಕ್ಕೇಶ್ವರನನ್ನು 'ಮೂರು ಜಾವದೇವ' ಎಂದು ಸುತ್ತಿಸುತ್ತಾರೆ. ವೀರಶೈವ ಮಹಾ ಪುರಾಣ ಮತ್ತು ಅಬ್ಬಲೂರು ಚರಿತೆಗಳು ಚಿಕ್ಕೇಶ್ವರ ಯತಿಗಳಿಗೆ 'ಮೂರು ಜಾವದೇವ' ಎಂಬ ಹೆಸರು ಸಂದಿತ್ತು. ಎಂದು ಉಲ್ಲೇಖಸಿದರೆ ವಿರಕ್ತಿ ತೊಂಟದಾರ್ಯನ ಸಿದ್ದೇಶ್ವರ ಪುರಾಣದಲ್ಲಿ.......

ಅಗ್ಗಣಿಯ ದೇವರಸರೊಲದಿಂದೆ.

ಮನಸಿಜಾರಿಯ ನುತಿಸಿ ಪಡುಗಡ ಲೊಳಿಳಿಯುತಿಹ

ದಿನಕರನ ಮೂರು ಜವದ ತಾಣ ಕಡರೆಂದು ಪೇಳಿಯಾ ಮಾತುಗೇಳ್ದು
ತನು ಕಂಪಿಸುತ್ತಿವಂ ವೀರಭದ್ರನೊ ಬಳಿಕ್ಕನ
ಘನಹ ಸೂರ್ಯ ಪಾತನ ಗಣೇಶನೋ ನಿನು
ತ್ತನವಿನಿಂದಂಜಿ ಮೇಲದೆ ಮಗುಳ್ದೇಳಿ ರವಿಮೂರು ಜಾವದ ಕಾಣಿಕೆ
ಬಂದು ನಿಲೆಯಗ್ಗಳೆಯ ದೇವರಸರಿಗೆ ನಾಮ
ವಂದಿಂದ ಮೂರು ಜಾವದ ದೇವರೆಂದಾಯ್ತು"[೧೯]

ಪದ್ಯದ ವಿವರಣೆಯಿಂದ ಅಗ್ಗಳೆಯ ದೇವರೆಸರಿಗೆ ಮೂರು ಜಾವದೇವ ಎಂಬ ಹೆಸರು ಬಂದಿತ್ತು. ಅಗ್ಗಳೆಯ ದೇವರಸ ಎಂಬುವುದು ಚಿಕ್ಕೇಶ್ವರಯನ್ನುವ ಮತ್ತೊಂದು ಹೆಸರು ಆಗಿರಬೇಕೆಂದು ಶಾಸನಕಾರರು ಊಹೆಮಾಡಿದ್ದಾರೆ.[೨೦]

"ಚಿಕ್ಕೇಶಗುರು ಐತಿಹಾಸಿಕ ವ್ಯಕ್ತಿವೆಂಬುವುದಕ್ಕೆ ೧) ಕ್ರಿ.ಶ.೧೦೫೯ ಹಿರೆಮಗಲೇರಿ ಶಾಸನ (ಎಸ್.ಡಿ.ಡಿ.ಸಂ.ಸಂಖ್ಯೆ ೧೨೪), ೨) ಕ್ರಿ.ಶ. ೧೧೦೫ರ ರಟ್ಟಿಹಳ್ಳಿಯ ಶಾಸನ(ಕೆ.ಡಿ.ಸಂ.VI.ಸಂ.೩೭), ೩) ಕ್ರಿ.ಶ. ೧೨೩೮ರ ರಟ್ಟಿಹಳ್ಳಿಯ ಮತ್ತೊಂದು ಶಾಸನ ೪) ಲಕ್ಷ್ಮೇಶ್ವರದ ಕ್ರಿ.ಶ. ೧೨೨೭ ಹಾಗೂ ಇದೇ ಕಾಲಕ್ಕೆ ಸೇರಿದ ಚಿಕ್ಕಮಾರಡಿ ಶಾಸನ, ೫) ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿದ ಕಲಕೇರಿ ಶಾಸನಗಳಲ್ಲಿ ಮೂರುಜಾವುದ ದೇವರ ಉಲ್ಲೇಖ ಕಂಡುಬರುತ್ತದೆ. ಕಾಲದ ದೃಷ್ಟಿಯಿಂದ ಪರಿಸಿಲಿಸಿದರೆ ಮೇಲಿನ ಶಾಸನಗಳಲ್ಲಿ ಉಲ್ಲೇಖಿತರಾಗಿರುವ ಮೂರು ಜಾವುದ ದೇವರು ಒಬ್ಬರಲ್ಲಿ ನಾಲ್ವರು ಎಂದೆನಿಸುತ್ತದೆ ಎಂದು ಶಾಸನಕಾರರು ಹೇಳುತ್ತಾರೆ. ಕಾಲಕ್ರಮವಾಗಿ ೧೧ನೇ ಶತಮಾನ, ೧೨ನೇ ಶತಮಾನ ಹಾಗೂ ೧೩ನೇ ಶತಮಾನದಲ್ಲಿ ಇದ್ದವರು ಎಂದೆನಿಸುತ್ತದೆ. ಇವರಲ್ಲಿ ಜೈನರವಿರುದ್ದ ಹೊರಾಡಿ ಶಿರಪಾರಮ್ಯವನ್ನು ಮೇರೆದು ಶಿವಸಂಸ್ಕೃತಿಯನ್ನು ರಕ್ಷೀಸಲು ಕಾರಣಿಕರ್ತನಾದ ಏಕಾಂತ ರಾಮಯ್ಯನಿಗೆ ನೆರವು ನೀಡಿದವರು. ಸಮಕಾಲಿನ ದೃಷ್ಟಿಯಲ್ಲಿ ಕ್ರಿ.ಶ. ೧೧೭೪ರ ರಟ್ಟಿಹಳ್ಳಿಯ ಶಾಸನೋಕ್ತ ಮೂರುಜಾವ ದೇವನೇ ಆಗಿರಬೇಕೆಂದು ಶಾಸನಕಾರರ ಅಭಿಪ್ರಾಯವಾಗಿದೆ. ಶಾಸನದಲ್ಲಿ ಇತನನ್ನು ಲಕುಲೀಶನ ಗುರು ಎಂದು ಸ್ತುತಿಸಿದೆ. ಈ ಮೂರುಜಾವದ ದೇವರು ಅಬ್ಬಲೂರು ಪರಿಸರದ ಅಂತರವಳ್ಳಿಯವನು ಎಂದು ಕಂತುಹರನ ಮತದವರ ಸಂತತಿಯವನು ಕಾಯ್ದವನು ಎಂಬ ವಿವರ ಅಬ್ಬಲೂರು ಚರಿತೆಯಿಂದ ತಿಳಿದುಬರುತ್ತದೆ. ಇಂದಿಗೂ ಅಂತರವಳ್ಳಿಯಲ್ಲಿ ಮೂರುಜಾವುದ ಚಿಕ್ಕೇಶ್ವರಯತಿಯ ದೇವರ ವಿಗ್ರಹವನ್ನು ಕಾಣಬಹುದಾಗಿದೆ.[೨೧]

### ೩.೪ ಏಕಾಂತ ರಾಮಯ್ಯ ಜೈನರೊಡನೆ ಸಂಘರ್ಷ

ಜೈನಮತಕ್ಕೆ ಕರ್ನಾಕದಲ್ಲಿ ರಾಜಮನೆತನಗಳು ಸಾಕಷ್ಟು ಪ್ರೊತ್ಸಾಹವನ್ನು ಕೊಟ್ಟಿದ್ದವು ತಲಕಾಡಿನ ಗಂಗರಂತೂ ಕರ್ನಾಟಕದಲ್ಲಿ ಜೈನಧರ್ಮದ ಆಧಾರಸ್ತಂಭಗಳಾಗಿ ಬೆಳಗಿದರು. ರಾಷ್ಟ್ರಕೂಟ, ಚಾಲುಕ್ಯರ ಒಂದು ಕಾಲದಲ್ಲಿ ಈ ಜೈನಧರ್ಮವು ಹೆಚ್ಚು ಪ್ರಬಲವಾಗಿ ಬೆಳೆದಿತ್ತು. ಅನೇಕ ರಾಜರುಗಳು ಕೆಲವು ಅರಸು ಮನೆತನಗಳು ಜೈನಮತಕ್ಕೆ ಒಂದಿಲ್ಲೊಂದು ಬಗೆಯಲ್ಲಿ ಪ್ರೊತ್ಸಾಹಕೊಟ್ಟು ರಕ್ಷಿಸಿ ಪೊಷಿಸಿಕೊಂಡು

ಬಂದರು. ಹೊಯ್ಸಳ ರಾಜ್ಯಸ್ಥಾಪಕ ಮತ್ತು ಆರಂಭಕಾಲದ ಅರಸರು ಜೈನರಾಗಿದ್ದರೆಂದು ಕೆಲವು ಆಧಾರಗಳಿಂದ ದೊರೆಯುತ್ತವೆ. ವಿಷ್ಣುವರ್ಧನನು ಮೊದಲು ಜೈನನಾಗಿ ಆಮೇಲೆ ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿದನೆನ್ನುವ ವಾದವನ್ನು ಪ್ರತಿಪಾಧಿಸುವ ಪ್ರಭಲ ಆಧಾರಗಳಿಲ್ಲ. ವಿಷ್ಣುವರ್ಧನ ಕಾಲದಲ್ಲಿ ಜೈನಮತವು ತನ್ನ ವಿಜೃಂಭಣೆಯ ಕೊನೆಯ ಹಂತವನ್ನು ಮುಟ್ಟಿತೆಂದು ಹೇಳಬಹುದು. ಹೊಯ್ಸಳ ರಾಜ್ಯ ಆರಂಭವಾದಮೇಲೆ ಸಳನ ಕಾಲದಿಂದ ವಿನಿಯಾಧಿತ್ಯನಕಾಲದವರೆಗೂ ಆಳಿದ ಅರಸರ ವೈಯಕ್ತಿಕ ಒಲವು ಜೈನಮತದೆಡೆಗೆ ಇದ್ದ ಬಗ್ಗೆ ಎರಯಂಗನ ಕಾಲದಿಂದ ಈ ಒಲವು ಬತ್ತತೊಡಗಿದ ಬಗ್ಗೆ ಶಾಸನಗಳಿಂದ ಆಧಾರ ದೊರೆಯುವುದು. ಹೊಯ್ಸಳ ರಾಜ್ಯದ ಅಡಿಗಲ್ಲನ್ನು ಭದ್ರಪಡಿಸುವ ೧೦೭೪–೧೧೧೩ರ ಕಾಲಾವಧಿಯಲ್ಲಯೇ ಜೈನಮತದ ಉಲ್ಲೇಖ ಅದೆ ವಿರಳವಾಗಿ ಕಂಡುಬರುತ್ತದೆ. ಬಹುಶಃ ಈ ಕಾಲಾವಧಿಯಲ್ಲಿ ರಾಜರ ವೈಯಕ್ತಿಕ ಒಲವನ್ನು ಜೈನ ಧರ್ಮವು ಕಳೆದುಕೊಂಡಂತೆ ಕಾಣುವುದು. ಆದರೆ ಆಳುವ ಅರಸರು ಜಿನಾಲಯಗಳನ್ನು ಕಟ್ಟಿ ಹೋದರು ಅವರ ಅರಸಿಯರು, ದಂಡನಾಯಕರು, ಮಂತ್ರಿಗಳು, ರಾಜ್ಯದ ಪ್ರತಿಷ್ಠಿತ ವರ್ಣಿಕರು ಹಾಗೂ ವೃತ್ತಿಗಳಿಗೆ ಸೇರಿದವರು ಈ ಧರ್ಮವನ್ನು ಪ್ರೋತ್ಸಾಹಿಸಿದರು. ಜೈನ ಕೇಂದ್ರಗಳು ಕರ್ನಾಟಕ ರಾಷ್ಟ್ರಕೂಟ–ಚಾಳುಕ್ಯ ಯುಗದಲ್ಲಿ ಶ್ರವಣಬೆಳಗೊಳ, ಕೊಪಣ ಮುಂತಾದ ಸುಪ್ರಸಿದ್ದ ಜೀನ ಕ್ಷೇತ್ರಗಳಷ್ಟೆ ಅಲ್ಲದೆ ಬಿಜಾಪೂರ ಜಿಲ್ಲೇಯ ಅರಸೀಬಿಡಿ, ಹೊನ್ನವಾಡ, ನಂದವಾಡಿಕೆ, ಚಾಂದಕವಡಿ, ಹುನಗುಂದ, ಬೆಳಗಾವಿ ಜಿಲ್ಲೆಯ ಸವದತ್ತಿ, ಮುಳಗುಂದ, ನರೆಗಲ್ಲ, ಲಕ್ಕುಂಡಿ, ಕೊಣ್ಣೂರು, ಹೂಲಿ, ಧಾರವಾಡ ಜಿಲ್ಲೆಯ ಮುಳಗುಂದ, ಮುಗದ, ಸೊರಟೂರು. ಗುಡಿಗೇರೆ ಬಳ್ಳಾರಿ ಜಿಲ್ಲೇಯ ಕೋಗಳಿ, ನಂದಿಬೇವೂರು, ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿ ಇತ್ಯಾದಿ ಹಲವು ಊರುಗಳಲ್ಲಿ ರಾಷ್ಟ್ರಕೂಟರು–ಚಾಲುಕ್ಯರ ಕಾಲದಲ್ಲಿ ಹಾಗೂ ಇಮ್ಮಡಿ ಬಲ್ಲಾಳನ ನಂತರ ಜೈನಮತವು ಹಲವು ಕೇಂದ್ರಗಳಿಗೆ ಮಾತ್ರ ಸೀಮಿತವಾದಂತೆ ತೋರಿಬರುವುದು. ಉದಾಹರಣೆಗೆ ಶ್ರವಣಬೆಳಗೊಳ ಮತ್ತು ಆಕ್ಷೇತ್ರದ ಸುತ್ತ ಮುತ್ತಲ ಹಳ್ಳಿಗಳಲ್ಲಿ ಬಂದಾಪುರ, ಕೊಲ್ಲಾಣ, ಭೊಗಾವತಿ, ಕೋಡಿಹಾಳ, ಕಿತ್ತೂರು, ಬೊಮ್ಮನಹಳ್ಳಿ, ಕುಪ್ಪತ್ತೂರು, ಬಂದಳಿಕೆ ಮೊದಲಾದೆಡೆಯಲ್ಲಿಯ ಧಾರ್ಮಿಕ ಚಟುವಟಿಕೆಗಳನ್ನು ಕೂಲಂಕುಷವಾಗಿ ಪರಿಕ್ಷಿಸಿದರೆ ಆ ಕಾಲದ ಜೈನರಲ್ಲನೇಕರು ಉನ್ನತ ಅಧಿಕಾರ ವರ್ಗಕ್ಕೆ ಸೇರದವರಾಗಿದ್ದಾರೆ. ವರ್ಣಿಕ ವರ್ಗದವರಾಗಿದ್ದರೆಂಬ ಅಂಶ ತಿಳಿಯುವುದು ರಾಜಾಶ್ರಯವನ್ನಲ್ಲದೆ. ಸಮಾಜದ ಉನ್ನತ ಅಧಿಕಾರಿ ವರ್ಗ ಹಾಗೂ ಪ್ರಭಾವಿ ವರ್ಗಗಳ ಬೆಂಬಲವನ್ನು ಜೈನಮತವು ಕಳೆದುಕೊಂಡತ್ತೆ ಕಂಡುಬರುವುದು. ಶೆಟ್ಟಿ, ಪಟ್ಟಣಸ್ವಾಮಿ, ಹೆಗ್ಗಡೆ, ಗಾಮುಂಡ, ಅಲ್ಪಸೇನೆಯ ದಣ್ಣಾಯಕಾ ಇವರಲ್ಲಿ ಹಲವರು ಗಂಗರಾಜ–ರೇಚಿಮಯ್ಯನಂತಹ ಪ್ರತಿಷ್ಠೀತ ಜೈನರನ್ನು ಈ ಕಾಲದಲ್ಲಿ ನಾವು ಕಾಣಲಾರೆವು.[೨೨]

ದಾವಣಗೆರೆ ಪ್ರದೇಶದಲ್ಲಿನ ಬೇತ್ತೂರು ಮತ್ತು ಶ್ಯಾಮನೂರುಗಳು ಕೂಡಾ ಪ್ರಸಿದ್ದವಾದ ಜೈನ ಸ್ಥಳಗಳಾಗಿದ್ದವು ಎನ್ನುವುದಕ್ಕೆ ಶಾಸನಗಳಿಂದ ಆಧಾರ ದೊರೆಯುವುದು. ೧೧ನೇ ಶತಮಾನದ ಮಧ್ಯಭಾಗದಲ್ಲಿ ಕಾಣಿಸಿಕೊಳ್ಳುವ ಶಾಸನದಲ್ಲಿ 'ತೊಲಗದೇ ಜೈನಮಾರ್ಗ್ಗದೊಳ್ ನಿಶ್ಚಳರಪ್ಪುದು' ಕ್ರಿ.ಶ.

೧೦೫೫ರ ಈ ಶಾಸನ ಜೈನ ಧರ್ಮವನ್ನು ಬಿಟ್ಟು ಹೊಗಬೇಡಿರೆಂದು ಜೈನ ಧರ್ಮದ ಒಕ್ಕೊರಲಿನ ಕೂಗಾಗಿದೆ. ಜೈನ ಧರ್ಮವು ತನ್ನ ಅಸ್ಥಿರತೆಯನ್ನು ಸೂಚಿಸುವ ಮಾತಾಗಿದೆ.[೨೩] ಬಳ್ಳಾರಿ ಜಿಲ್ಲೆಯ ಕೋಗಳಿ ಗ್ರಾಮದ ಈ ಶಾಸನವು, ಕೋಗಳಿಯೂ ರಾಷ್ಟ್ರಕೂಟ ಹಾಗೂ ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಜೈನ ಸ್ಥಳವಾಗಿದ್ದುದ್ದನ್ನು ಗಮನಿಸಬಹುದು. ಜೈನ ಮತಕ್ಕೆ ಪ್ರಭಲವಾದ ಅಡ್ಡಿಯನ್ನೊಂಟು ಮಾಡಿದ್ದುದ್ದು ಶೈವ ಮತವೆ ಎನ್ನುವುದನ್ನು ಗಮನಿಸಬಹುದು.

ಬಸದಿಗಳನ್ನು ಶೈವ ದೇವಾಲಯಗಳಾಗಿ ಪರಿವರ್ತಸುವ ಜಿನನ ಬದಲು ಶಿವನನ್ನು ಪ್ರತಿಷ್ಠಾಪಿಸುವುದರೊಂದಿಗೆ, ಜೈನರೊಡನೆ ವಾಗ್ವಾದಕ್ಕಿಳಿದು ಘೋರಕಲಹ ವೇರ್ಪಟ್ಟಿರುವ ಅನೇಕ ಘಟನೆಗಳನ್ನು ಶಾಸನಗಳು ನಿರೂಪಿಸುತ್ತವೆ. ಕಳಚೂರ್ಯ ನಾಲ್ಕನೇಯ ಸೋಮೇಶ್ವರನೆಂದು ಹೇಳುವ ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಅಣ್ಣಿಗೆರೆಯ ಕ್ರಿ.ಶ. ೧೧೮೪ರ ಶಾಸನವೊಂದರಲ್ಲಿ ಗೊಗ್ಗಿದೇವ ಎಂಬ ಶಿವಭಕ್ತ ಸಾಮಂತನು ಶೈವಧರ್ಮಕ್ಕೆ ತನ್ನ ಧರ್ಮವನೆಲ್ಲಾ ಮೀಸಲಿಟ್ಟನು ಎಂದು ಹೇಳಿ ಅವನ ಶಿವ ನಿಷ್ಠೆಯನ್ನು ಹೊಗಳುತ್ತಾ ಎದುರಾದ ಮತಗಳನ್ನು ಸಮರ್ಥವಾಗಿ ಎದುರಿಸುತ್ತಾ ಹೊರಾಡಿದ ವಿಷವನ್ನು ತಿಳಿಸುತ್ತದೆ.[೨೪]

'ಜಯಿನಮ್ರಿಗ ಬೇಂಟ್ಟೆಕಾರೆಂ! ಜಯಿನಾಗ ಮಧೂಮಕೇತು ಜಯಿನಕು(ಠಾ)ರಂ!
ಜಯಿನಫಣಿ ವಯಿನತೇಯಂ! ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸಂ!!
ಅಗ್ಗದ ಘಟಾಂತಿಕಿಯಂ ಅದ! ನುರ್ಗ್ಗಾಗಿರೆಯೊಡೆದು ಕಳೆದು ಜಿನನಂತಾಗಲೇ!
ದುರ್ಗ್ಗತಿಯೊಳಿಕ್ಕಿ ಮೆಟ್ಟಿದ! ಗೊಗ್ಗರಸಾಗ್ರಣಿ ಕೊಮಾರ ಆಹವ ಧೀರಂ!![೨೫]

ಜೈನಮೃಗ ಬೇಟೆಕಾರ ಜೈನಕುಠಾರ ಎಂದು ಗೊಗ್ಗಿದೇವನನ್ನು ವಿಶೇಷಣಗಳಿಂದ ಕರೆಯಲಾಗಿದೆ. ಅವನು ಜಿನನ ವಿಗ್ರಹಗಳನ್ನು ಭಗ್ನಮಾಡಿದ ವೀರ ಕಥೆಯನ್ನು ಕೊಂಡಾಡಲಾಗಿದೆ. ಒಂದೊಂದಾಗಿ ಜೈನ ಧರ್ಮ ತನ್ನ ಕೇಂದ್ರಸ್ಥಾನ ಕಳೇದುಕೊಂಡು ಬರುತ್ತಿರುವ ಚಿತ್ರವನ್ನು ನೋಡಲಾಯಿತು. ಈಗ ಬಿಜಾಪುರ ಜಿಲ್ಲೇಯ ಮುದ್ದೇಬಿಹಾಳ ತಾಲ್ಲೂಕಿನ ತಾಳಿಕೋಟೆ ಶಾಸನವನ್ನು ಗಮನಿಸಬಹುದು.

'ವೀರು ಪರಸ ದೇವರನ್ನು ಜಿನಸಮಯವನದಹನದಾವಾಳರೂ' ಎಂದು ಅನಂತ ದೇಶದೇಶಾಂತರದಲ್ಲಿ ವಿರಾದ ಪರಸಮಹಿಗಳಂ ಪಡಲ್ವಡಿಸಿ ಲೋಕಮನಾಕಂಪಂಗೊಳ್ಸಿ ಬಸದಿಗಳಂ ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸ'ನಮಂ(ಕಾ)ಣ್ಣಾಳ್ಸಿ ಚಲಮಂ ಮೇರೆಯುತ್ತಿದ್ದರೆಂದು ಹೊಗಳಿದೆ.[೨೬] ಅವನು ಪುರಾತನ ನೂತನ ರೆನಿಸಿಕೊಂಡ ಅಸಂಖ್ಯಾತ ಗಣಗಳ ಸೇವೆಯನ್ನು ಮಾಡುತ್ತಿರುವ ವಿಷಯವು ಈ ಶಾಸನದಲ್ಲಿವೆ.

ಇದೇ ಶಾಸನವು ಪರಿಯಳಿಗೆ, ಅಣಿಲೇವಾಡಾ, ಅಬ್ಬಲೂರು, ಮಾರಡಿಗೆ, ಮೊದಲಾದ ೧೦ಗ್ರಾಮಗಳಲ್ಲಿ ಪರಸಮಯವನ್ನು ದ್ವಂಸಗೊಳಿಸಿ ಶಿವ ಸಮಯವನ್ನು ಸಮಜ್ವೊಲಗೊಳಿಸಿದ ವಿಷಯವು ಈ ಶಾಸನದಲ್ಲಿ ಇದೆ. ಈ ಶಾಸನವು ಗ್ರಾಮಗಳ ಹೆಸರನ್ನು ಸೂಚಿಸಿ ಅದರ ಹಿನ್ನೆಲೆಯಲ್ಲಿ

ಜಿನಮಯದ ಎದುರು ಹೊರಾಡಿದ ವ್ಯಕ್ತಿಗಳ ವಿವರಗಳಬಗ್ಗೆ ಹರಿಹರನ ರಗಳೆಗಳಲ್ಲಿ ಮಾಹಿತಿ ದೊರೆಯುತ್ತದೆ.

ಪರಿಯಳಿಗೆ ವೈಜಕವ್ವೆ ಅನಿವಾರ್ಯವಾಗಿ ಜೈನ ಪತಿಯನ್ನು ಮದುವೆಯಾದ ಈಕೆ ಒಮ್ಮೆ ಶ್ರವಣರಿಗಾಗಿ ಸಿದಪಡಿಸಿದ ಅನ್ನವನ್ನು ಜಂಗಮರಿಗೆ ಉಣಬಡಿಸಿದಳು. ಇದರಿಂದ ಕೊಪಗೊಂಡ ಪತಿ ಹೊಡೆದ ಹೊಡೆತಗಳೆಲ್ಲಾ ಆ ಊರ ಜೈನರನ್ನು ಘಾತಿಸಿದವು. ಮರುದಿನ ಮುಂಜಾನೆ ಎಷ್ಟುಯತ್ನಿಸಿದರೂ ಬಸದಿಯ ಬಾಗೀಲು ತೆರೆಯದಿದ್ದುದು ಇವಳ ಹಸ್ತಾಸ್ಪರ್ಶದಿಂದ ತೆರೆಯುವಷ್ಟರಲ್ಲಿ ಜಿನ ಮೂರ್ತಿ ಒಡೆದು ಉದ್ಭವಿಸಿದ ಶಿವಲಿಂಗದಲ್ಲಿ ಈಕೆ ಐಕ್ಯವಾದಳು.

ಮಾರುಡಿಗೆ ನಾಚಯ್ಯ ಗಾಣಿಗರ ಕೋಮಿಗೆ ಸೇರಿದವನು. ಎಣ್ಣೆ ಮಾರಿಕೊಂಡು ಜೀವಿಸಿ, ಅದರಲ್ಲೇ ದಾಸೋಹ ಕಾರ್ಯಕ್ರಮವನ್ನು ಮುನ್ನಡಿಸಿಕೊಂಡಿದ್ದವನು. ಹಾಗೆಯೇ ಶೈವಧರ್ಮದಲ್ಲಿ ಅವನು ರೂಢಿಸಿಕೊಂಡ ಶಿವನಿಂದೆಯನ್ನು ಸಹಿಸಿದ ವೀರನಿಷ್ಠೆ. ಮಾರುಡಿಗೆಯ ಜೈನರು ಆ ಊರಿಗೆ ಬಂದ ಶಿವಭಕ್ತನೊಬ್ಬನ ಮೇಲೆ ವಿನಾಕಾರಣ ಅಥವಾ ಅವನೂ ಶಿವಭಕ್ತನೆಂಬ ಕಾರಣಕ್ಕಾಗಿ ಅವನ ಮೇಲೆ ಹಲ್ಲೆ ಮಾಡಿ ಅವನನ್ನು ಅವಮಾನಗೊಳಿಸಿ ಕಳಿಸಿದ್ದಾರೆ, ಭಕ್ತನಿಗಾದ ಅವಮಾನ ತನಗೆಯಾದ ಅವಮಾನವೆಂದು ಶಿವನು ನಾಚಯ್ಯನಿಗೆ ತಿಳಿಹೇಳಿದುದರ ಅರ್ಥ, ಒಬ್ಬ ಶಿವಭಕ್ತನಿಗಾದ ಅವಮಾನ ಇಡೀ ಶಿವಭಕ್ತರಿಗಾದ ಅವಮಾನವೆಂದು ತೇರಸರಾದ ಸಹ ಶರಣರ ಜೊತೆಗೂಡಿ ಜೈನ ಬಸದಿಗಳಲ್ಲಿನ ಜಿನ ಪ್ರತಿಮೆಗಳನ್ನೆಲ್ಲ ಧ್ವಂಸಮಾಡಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ, ಶೈವ ವಿರೋದಿಗಳಾದ ಜೈನರ ಸಂಹಾರವನ್ನು ಮಾಡುತ್ತಾ ಶೈವಧರ್ಮದಲ್ಲಿ ನಿಷ್ಠೆಯುಳ್ಳವನಾಗಿದ್ದವನು.[೨೭] ಹರಿಹರನ ಕಾಲದ ರಗಳೆಯ ಮೂಲಕ ತಿಳಿಯಬಹುದಾಗಿದೆ.

ಅಬ್ಬಲೂರಿನ ಏಕಾಂತ ರಾಮಯ್ಯನ ಶಾಸನ (ಎಇ V, ಪುಟ. ೨೪೫-೨೬೨; ಸು. ೧೨೦೦) ಈ ಶಾಸನವು ಜೈನರಿಗೆ ಮತ್ತು ಶಿವಭಕ್ತನಾದ ಏಕಾಂತ ರಾಮಯ್ಯನಿಗೂ ನಡೆದ ಸಂಘರ್ಷವನ್ನು ಸವಿವರವಾಗಿ ತಿಳಿಸುತ್ತದೆ. ಅಬ್ಬಲೂರಿನ ಶಾಸನದ ಕಾಲ ೧೨೦೦ ಎಂದು ಶಾಸನ ತಜ್ಞರು ಅಂದಾಜಿಸಿದ್ದಾರೆ. ಇದು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಅಬ್ಬಲೂರಿನ ಸೋಮೇಶ್ವರ ದೇವಾಲಯದಲ್ಲಿರುವ ಶಾಸನವಾಗಿದೆ. ಈ ಒಂದು ಶಾಸನವು ಶೈವಧರ್ಮದ ಹಿತಾಸಕ್ತಿಯನ್ನು ಕಾಪಾಡುತ್ತಾ ಆಕಾಲದ ಶೈವ ಧರ್ಮದ ಉಳಿವಿಗಾಗಿ ಜೈನರ ವಿರುದ್ಧ ಹೊರಾಡಿ ಶೈವಧರ್ಮವನ್ನು ಉಳಿಸಿಕೊಂಡ ಬಗೆಯನ್ನು ತಿಳಿಸುತ್ತದೆ.

ಈ ಶಾಸನದಲ್ಲಿ ಬರುವ ಏಕಾಂತ ರಾಮಯ್ಯನನ್ನು ಶೈವರ ನಾಯಕನಾಗಿ ಶಾಸನ ಬಿಂಬಿಸುತ್ತದೆ. ಈ 'ಏಕಾಂತದ' ಎಂಬ ವಿಶೇಷಣವು ರಾಮಯ್ಯನಿಗೆ ಜೈನಧರ್ಮದ ಮೇಲಿನ ಅವನ ವಿಜಯದ ನಂತರ ಬಂದಿರಬಹುದೆಂದು ಶಾಸನಕಾರರೂ ಊಹಿಸಿದ್ದಾರೆ. ಇದು ಅವನ ಶೈವ ನಿಷ್ಠೆಯನ್ನು ಸೂಚಿಸುವುದಲ್ಲದೆ, 'ಅನೇಕಾಂತವಾದ' ಎಂದು ಕರೆಯಿಸಿಕೊಳ್ಳುವ ಜೈನ ಧರ್ಮವನ್ನು

ಗೆದ್ದಿದ್ದಕ್ಕೆ ಸಂಕೇತವಾಗಿ ಇರಬಹುದೆಂದು ಪಿ.ಬಿ. ದೇಸಾಯಿ ಅವರು ಅಭಿಪ್ರಾಯವಾಗಿದೆ. ಈ ಶಾಸನವು ಏಕಾಂತದ ರಾಮಯ್ಯನು ಶಿವನನ್ನು ಕುರಿತು

"ಏಕಾಗ್ರ ಭಕ್ತಿಯೋಗದಿ
ನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದು
ಪ್ಪೇಕಾಂತದೊಳಾರಾಧಿಸಿ
ಯೇಕಾಂತದ ರಾಮನೆಂಬ ಪೆಸರ(ಂ) ಪಡೆದಂ"[೨೮]

ಎಂದು ಶಿವನನ್ನು ಪೂಜಿಸುತ್ತಿದ್ದರಿಂದ ಏಕಾಂತದ ರಾಮಯ್ಯನೆಂಬ ಹೆಸರು ಬಂದಿರಬೇಕು. ರಾಮಯ್ಯನು ಶಿವನ ಭಕ್ತಿಯಲ್ಲಿ ಏಕಾಗ್ರ ನಿಷ್ಠೆಯನ್ನು ಸಾಧಿಸಿಕೊಂಡಿದ್ದು, ಪರಹಿತ ಸಾಧಿಸುವಲ್ಲಿ ಕೊನೆಕಂಡಿದ್ದಾರೆ. ಅದು ಅವನ ಸಾಧನೆಯ ಶಕ್ತಿಯಾಗಿ ಪರಿಣಮಿಸಿತ್ತು. ಆದರೆ ಅದು ಪರಮತ ಹಿಂಸಾ ಪೀಡನೆಗೆ ಪ್ರೇರಕ ಶಕ್ತಿಯಾಗಿತ್ತು ಎಂದು ಶಾಸನದ ಪಠ್ಯವೇ ತಿಳಿಸುತ್ತದೆ. ಅಲ್ಲದೆ 'ಏಕಾಂತದ ರಾಮಯ್ಯಂ ಅತಿ ಶುದ್ಧನಾಗಿ ಶಿವಸನ್ನಿಧಿಯೊಳನ್ನ ದೇವತಾಸ್ತವನಂ ಮಾಡಲಾಗದು' ಎಂಬುದು ಶಾಸನವು ಏಕಾಂತದ ರಾಮಯ್ಯನ ಹಿಂಸಾತ್ಮಕ ಕೃತ್ಯಗಳನ್ನು ಶ್ರೇಷ್ಠಗುಣಗಳಂತೆ ಹೇಳುತ್ತದೆ. ಈ ಎಲ್ಲವುಗಳಿಂದ ಏಕಾಂತದ ರಾಮಯ್ಯನು ಜೈನ ಬಸದಿಯನ್ನೊಡೆದು ಶೈವ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ ವಿಷಯವನ್ನು ಪ್ರಸ್ತಾಪಿಸಿರುವುದಲ್ಲದೆ, ಅವನು ಬಸದಿಯ ಯಾವ ಯಾವ ಸ್ಥಾನಗಳಲ್ಲಿ ಸಾಹಸಕಾರ್ಯಗಳನ್ನು ಮಾಡಿದ ಎಂಬುದನ್ನು ಶಿಲ್ಪದಲ್ಲಿ ಚಿತ್ರಿಸಿ ಕೆಳಗೆ ಆ ಚಿತ್ರಗಳಿಗೆ ಸರಿಹೊಂದುವ ಮಾಹಿತಿಯನ್ನು ನೊಡಬಹುದು.

- ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಯ್ಯಂ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಹರೆದ ಟಾವು.
- ಸಂಕಗಾವುಂಡನೊಡೆಯಲೀಯದೆ ಆಳುಂ ಕುದುರೆನ್ನೊಡ್ಡಿರಲು ಏಕಾಂತದ ರಾಮಯ್ಯ ಕಾದಿ ಗೆಲ್ದು ಜಿನನೊಡೆದು ಲಿಂಗ ಪ್ರತಿಷ್ಠೆಯಂ ಮಾಡಿದ ಟಾವು.
- ಶ್ರೀ ಮದೇಕಾಂತದ ರಾಮಯ್ಯಂಗೆ ಸಂಕಗಾವುಂಡನೊಲೆಯಂ ಕುಡುವ ಟಾವು. [೨೯]

ಈ ಶಾಸನವು ಸಂಪೂರ್ಣವಾಗಿ ಎರಡು ಮತಗಳ ನಡುವೆ ನಡೆಯುತ್ತಿದ್ದ ಸಂಘರ್ಷವನ್ನು ಧ್ವನಿಸುತ್ತದೆ. ಅಲ್ಲದೆ ಈ ಘಟನೆಯು ನಡೆದ ಸಂದರ್ಭದಲ್ಲಿ ಜೈನ ಧರ್ಮ ತನ್ನ ಮೊದಲಿದ್ದ ಪ್ರಾಮುಖ್ಯತೆಯನ್ನು ಕಳೆದುಕೊಂಡಿರುವ ಕುರುಹುಗಳಿವೆ. ಇಂತಹ ಸಂದರ್ಭದಲ್ಲಿ ದೊರೆಯಾದ ಬಿಜ್ಜಳ ಈ ಎರಡು ಧರ್ಮಗಳು ಪರಸ್ಪರ ಒಂದಾಗುವಂತೆ ಯಾವುದೇ ಪ್ರಯತ್ನವನ್ನು ಮಾಡದೆ ಇರುವುದನ್ನು ಗಮನಿಸಬಹುದು. ಅಲ್ಲದೆ ರಾಜನಾದ ಬಿಜ್ಜಳನು ತನ್ನ ಕರ್ತವ್ಯವನ್ನು ಮರೆತಿರುವುದನ್ನು ಇದು ಪರೋಕ್ಷವಾಗಿ ಸೂಚಿಸುತ್ತದೆ. ಇದು ರಾಜನು ಯಾವುದೆ ಧರ್ಮ ಅಥವಾ ಮತಕ್ಕೆ ಕೊಟ್ಟಂತಹ ಪ್ರಾಮುಖ್ಯತೆ ಇನ್ನೊಂದು ಧರ್ಮವನ್ನು ಕಡೆಗಣಿಸಿದಂತೆಯೇ ಆಗುವುದರಿಂದ ಸಹಜವಾಗಿಯೇ ಆ

ಧರ್ಮದ ಮನಸ್ಸಿನಾಳದಲ್ಲಿ ಆ ರಾಜನಬಗ್ಗೆ ಅವನ ಆಡಳಿತದ ಬಗ್ಗೆ ಅಸಂತುಷ್ಠೆ ಶುರುವಾಗುತ್ತದೆ. ಇದು ರಾಜನ ಮತ್ತು ಆಳ್ವಿಕೆಯ ಬಗ್ಗೆ ಮೆಲ್ಲಗೆ ಕ್ಷೀಣಧ್ವನಿಯೊಂದು ಸಮಾಜದಲ್ಲಿ ಕೇಳಿಬರತೊಡಗಿದೆ. ಈ ಶಾಸನವು ವಿವರಿಸುವಂತೆ ಬಿಜ್ಜಳನು ರಾಮಯ್ಯ ಮಾಡಿದ ಪರಮ ಸಾಹಸಕ್ಕೆ ಮೆಚ್ಚಿ ವೀರಸೊಮನಾಥ ದೇವರ ದೇಗುಲದ ಮಾಹಾಕೂಟ ಪ್ರಕಾರ ಖಂಡಸ್ಪುಟಿತ ಜೀರ್ಣೋದ್ದಾರಕ್ಕು ರಂಗಭೋಗ ನೈವೇದ್ಯಕ್ಕೂ 'ಗೋಗಾವೆ' ಎಂಬ ಗ್ರಾಮವನ್ನು ಏಕಾಂತದ ರಾಮಯ್ಯನ ಕಾಲನ್ನು ತೊಳೆದು ಧಾರಪೂರ್ವಕವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ. ಇದೆಲ್ಲ ಸಹಜವಾಗಿಯೇ ಬಿಜ್ಜಳನು ಶೈವಮತಕ್ಕೆ ಕೊಟ್ಟಿರುವ ಪ್ರೊತ್ಸಾಹವನ್ನು ಇಂತಹ ಕಾರ್ಯಕ್ಕೆ ಕೊಟ್ಟ ಪ್ರಚೋಧನೆಯೆಂದೇ ಭಾವಿಸಿಕೊಂಡು ಶೈವರು ವೀರ ನಿಷ್ಠೇಯನ್ನು ತೋರಿದ್ದಿರಬಹುದು. ಅಂತೂ ಈ ಘಟನೆಗಳು ಬಿಜ್ಜಳನ ಆಳ್ವಿಕೆಯ ಕಾಲದಲ್ಲಿ ಬಲವಾದ ಪೆಟ್ಟುಕೊಟ್ಟಿರುವ ಸಾಧ್ಯತೆಯಿದೆ. ಮತಗಳ ನಡುವೆ ಸಮನ್ವಯತೆಯನ್ನು ತರಬೇಕಾಗಿದ್ದಂತ ಬಿಜ್ಜಳ ಈ ಘಟನೆಯನ್ನು ನಕ್ಕು ಹಗುರವಾಗಿ ತೆಗೆದುಕೊಂಡು ಚಕ್ರವರ್ತಿಯ ಕರ್ತವ್ಯವನ್ನು ಮರೆಸಿ ಅವನ ಫತನಕ್ಕೆ ನಾಂದಿಯನ್ನು ಹಾಡಿದಂತಿದೆ ಎಂದು ಹೇಳಬಹುದು.

ಏಕಾಂತದ ರಾಮಯ್ಯನು ಬಿಜ್ಜಳನನ್ನು ಕಂಡನೆಂದು ಶಾಸನವು ನಿರೂಪಿಸುತ್ತದೆ. ಇದರಿಂದ ಬಸವಣ್ಣನವರು ರಾಮಯ್ಯ ಸಮಕಾಲಿನರಾಗಿರಬೆಕೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಏಕಾಂತದ ರಾಮಯ್ಯನು ಬಿಜ್ಜಳನ ನಂತರವು ಕೊನೆಯ ಪಕ್ಷ ಕ್ರಿ.ಶ. ೧೨೦೦ರವರೆಗೂ ಬಹುಷ ಬದುಕಿದ್ದನು. ಅವನನ್ನು ಗೌರವಿಸಿದ ಕದಂಬರ ದೊರೆ ಕಾಮದೇವನು ಕ್ರಿ.ಶ. ೧೧೮೧ ರಿಂದ ೧೨೧೬ರಲ್ಲಿ ಆಳ್ವೀಕೆ ನಡೆಸಿದ ಬಗ್ಗೆ ತಿಳಿಯುತ್ತದೆ. ಅಬ್ಬಲೂರು ಶಾಸನದಲ್ಲಿ ಬಿಜ್ಜಳ ವೀರಸೋಮೇಶ್ವರ, ಕದಂಬಕಾಮ ಅರಸರ ರಾಮಯ್ಯಗಳ 'ಕಾಲಂ ಕರ್ಚಿ' ದತ್ತಿ ಬಿಟ್ಟಿರುವುದರಿಂದ ಇತನೂ ಬಿಜ್ಜಳನ ಸಮಕಾಲಿನನಾಗಿ ಮುಂದೆ ಇನ್ನೂ ಕೆಲವು ವರ್ಷಗಳ ಕಾಲ ಬದುಕಿ ಬಾಳಿರಬೇಕೆಂದು ಎಂ.ಚಿದಾನಮದಮೂರ್ತಿ ಮತ್ತು ಎಂ.ಎಂ.ಕಲಬುರ್ಗಿಯವರು ಪ್ರತಿಪಾದಿಸಿದ್ದಾರೆ.

ಅಬ್ಬಲೂರನ್ನು ಉಲ್ಲೇಖಿಸುವ ತಾಳಿಕೋಟೆ ಶಾಸನದ ಕಾಲ ೧೧೮೪ ಅಂದರೆ ಏಕಾಂತದ ರಾಮಯ್ಯನು ಜೈನರೊಡನೆ ಸಂಘರ್ಷಕ್ಕೆ ಇಳಿದ ಘಟನೆ ಹಿಂದೇಯೇ ನಡೆದಿದ್ದಿರುವ ಸಾಧ್ಯತೆಯಿದೆ. ಅಲ್ಲದೆ ಈ ತಾಳಿಕೊಟೆ ಶಾಸನವು ಜೈನ ಬಸದಿಗಳಲ್ಲಿ ಜಿನ ಬಿಂಬಗಳನ್ನು ಹಾಳುಮಾಡಿ ಅಲ್ಲಿ ಶಿವಲಿಂಗವನ್ನು ಸ್ಥಾಪಿಸಿರುವ ಉಲ್ಲೇಖಿಸಿರುವ ಊರುಗಳಲ್ಲಿ ಅಬ್ಬಲೂರುಕೂಡಾ ಒಂದಾಗಿದೆ. ಹಾಗೇಯೇ ಅಬ್ಬಲೂರಿನ ಶಾಸನದ ಕಾಲ ಕ್ರಿ.ಶ. ೧೨೦೦. ಬಹುಶ: ಈ ಶಾಸನವನ್ನು ಮತಿಯ ಕಾರಣಗಳಿಗಾಗಿ ಪುರ್ನನೆನಪಿಸುವ ಸಲುವಾಗಿ ಹಾಕಿಸಿರಬಹುದೆಂದು ವಿದ್ವಾಂಸರಲ್ಲಿ ಬಿನ್ನಮತವಿದೆ.[೩೦]

ಕಾಳಾಮುಖ ಶೈವರೊಡನೆ ಕಲಚೂರಿ ಅರಸರ ಪರೋಕ್ಷ ವಿಲ್ಲವೇ ಪ್ರತ್ಯಕ್ಷ ಸಂಬಂಧವನ್ನು ರುಜುಪಡಿಸಲು ಸುಮಾರು ೧೦–೧೨ ಶಾಸನಗಳಾದರೂ ಇಲ್ಲಿಯವರಗೂ ದೊರತಿವೆ. ಅವುಗಳ ಕಾಲ ವ್ಯಾಪ್ತಿ ಕ್ರಿ.ಶ. ೧೧೪೭ ರಿಂದ ಕ್ರಿ.ಶ. ೧೧೭೯, ಬಿಜ್ಜಳನು ಚಾಲೂಕ್ಯ ಜಗದೇಕ ಮಲ್ಲನ ಸಾಮಂತನಾಗಿದ್ದನು. (ಕ್ರಿ.ಶ. ೧೧೪೭)

ಕ್ರಿ.ಶ. ೧೧೫೬ ಮತ್ತು ಕ್ರಿ.ಶ. ೧೧೬೨ರಲ್ಲಿ ಸ್ವತಃ ಬಿಜ್ಜಳನೇ ಬಳ್ಳಿಗಾವಿಯ ಕೇದಾರ ಮಠಕ್ಕೆ ಬೇಟಿ ನೀಡಿರುವುದನ್ನು ಗಮನಿಸಬಹುದು. ಬಿಜ್ಜಳನು ವೈಯಕ್ತಿಕವಾಗಿ ಇಲ್ಲವೇ ತನ್ನ ಸಾಮಂತರ ಮೂಲಕ ಕೊಟ್ಟ ನೇರವಿನಿಂದ ಅವನ ಮಕ್ಕಳು ಇದನ್ನು ಮುಂದುವರೆಸಿಕೊಂಡು ಬಂದ ವಿವರಗಳಿಂದ ಕಲಚೂರ್ಯರು ಶೈವಮತದ ವಿರೋಧಿಗಳಾಗಿರಲಿಲ್ಲಯೆಂಬ ವಿಷಯ ಸ್ಪಷ್ಟವಾಗುತ್ತದೆ. ಅಬ್ಬಲೂರು ಶಾಸನದಂತೆ ಏಕಾಂತ ರಾಮಯ್ಯನು ಬ್ರಹ್ಮೇಶ್ವರ ದೇವಾಲಯದಲ್ಲಿ ತನ್ನ ಮತ ಪ್ರಸಾರ ಮಾಡಿದ ಈ ಕಾಳಾಮುಖ ಪುರೋಹಿತರ ವಂಶದಲ್ಲಿತ್ತೆಂಬುವುದಕ್ಕೆ ಆಧಾರಗಳಿವೆ. ಇದರಿಂದ ಏಕಾಂತ ರಾಮಯ್ಯನಿಗೂ ಕಾಳಾಮುಖರಿಗೂ ಸಂಬಂಧ ಅಥವಾ ಒಮ್ಮತವಿದ್ದಿತೆಂದು ತಿಳಿದುಬರುತ್ತದೆಯೆಂದು ಸಂಶೋಧಕರ ಅಭಿಪ್ರಾಯವಾಗಿದೆ.

ಏಕಾಂತದ ರಾಮಯ್ಯನು ಕಲ್ಯಾಣಕ್ಕೆ ಹೊಗುವ ಮೊದಲೂ ಕಾಳಾಮುಖ ಪಂಥ ದವನೆ ಆಗಿರಬಹುದೆಂದು ಎಸ್. ಶೆಟ್ಟರರವರ ಅಭಿಪ್ರಾಯವಾಗಿದೆ. ಶೈವ-ಜೈನರ ನಡುವಿನ ಘರ್ಷಣೆಯಿಂದ ಮುಂದೆ ಅನೇಕ ಜೈನ ಬಸದಿಗಳು ಶಿವ ದೇಗುಲಗಳಾಗಿ ಮಾರ್ಪಟ್ಟವು. ಏಕಾಂತ ರಾಮಯ್ಯ ಶಾಸನದಲ್ಲಿ ಸಂಕಗಾವುಂಡನ ಸವಾಲಿಗೆ ಪ್ರತಿಯಾಗಿ ಅಬ್ಬಲೂರು ಚರಿತೆಯಲ್ಲಿ ಉಲ್ಲೇಖಿಸಿದ ಶೈವ ಕ್ಷೇತ್ರಗಳಿಗೆ ತೆರಳಿ ಅಲ್ಲಿ ತನ್ನ ಶೈವನಿಷ್ಠರನ್ನು ಸಂಪರ್ಕಿಸಿ, ಅವರಿಂದ ಆರ್ಥಿಕ ಬಲ ಮತ್ತು ತೋಳ್ಬಲಗಳ (ಚಿಕ್ಕ ಸೈನ್ಯ ತುಕಡಿ) ಸಹಾಯವನ್ನು ಪಡೆದುಕೊಂಡು ಅಬ್ಬಲೂರಿಗೆ ಮರಳುತ್ತಾನೆ.

ಅಬ್ಬಲೂರಿನ ಜೈನ ಬಸದಿಯಲ್ಲಿನ ಜಿನಬಿಂಬವನ್ನು ಒಡೆದು ಅಲ್ಲಿ ಶಿವಪಾರಮ್ಯವನ್ನು ಸ್ಥಾಪಿಸಿರುವ ಸಾದ್ಯತೆಯಿದೆ. ಈ ರೀತಿಯ ವಿಚಾರಕ್ಕೆ ಒಂದು ಬಲವಾದ ಆಧಾರವಿದೆ, ಅದು ಅಬ್ಬಲೂರಿನಲ್ಲಿರುವ ಸೋಮನಾಥ ದೇವಾಲಯದಲ್ಲಿ ಬಿತ್ತಿಯಲ್ಲಿ ಚಿತ್ರಿಸಿರುವ ಜಿನಮೂರ್ತಿಯನ್ನು ಒಡೆದು, ಅಲ್ಲಿ ಶಿವ ಮೂರ್ತಿಯನ್ನು ಸ್ಥಾಪಿಸಿರುವ ಸಂದರ್ಭದಲ್ಲಿ ಏಕಾಂತ ರಾಮಯ್ಯನ ಹಿಂದೆ ಜನರ ಗುಂಪು ಇರುವುದು ಸಂಶಯಕ್ಕೆ ಕಾರಣವಾಗುತ್ತದೆಯೆಂದು ಶಾಸನಕಾರರ ಅಭಿಪ್ರಾಯ.

ಈ ಕಾಲಕ್ಕಾಗಲೇ ಏಕಾಂತ ರಾಮಯ್ಯನನ್ನು ಪೂಜೆ ಮಾಡುವುದರ ಮಟ್ಟಿಗೆ ಪ್ರಸಿದ್ಧನಾಗಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ. ಇದು ಅಬ್ಬಲೂರು ಮಾಳಗನಕೊಪ್ಪ ಸಮೀಪದ ಕಾನನದ ದೇವಾಲಯದ ಗದ್ದುಗೆಗಳನ್ನು ಬಿಟ್ಟು ಏಕಾಂತ ರಾಮಯ್ಯನ ಹೆಸರಿನಲ್ಲಿ ದೊರೆಯುವ ಮೂರನೇ ದೇವಾಲಯ ಎಂದೆನಿಸುತ್ತದೆ. ಸೋಮನಾಥ ದೇವರ ವರಪ್ರಸಾದದಿಂದ ಜನಸಿದ ರಾಮಯ್ಯನ ಜನ್ಮಸ್ಥಳವಾದ ಅಳಂದೆಯಲ್ಲಿ ಈಗಲೂ ಇರುವ ಸೋಮನಾಥ ದೇವಾಲಯದಲ್ಲಿ ರಾಮಯ್ಯನ ವಿಗ್ರಹವನ್ನು ಇತ್ತೀಚಿಗೆ ಸ್ಥಾಪಿಸಿದ್ದಾರೆ. ಇದಕ್ಕೆ ಈ ಭಾಗದ ಜನರು ಇದಕ್ಕೆ ಈಗಲೂ ದಿನನಿತ್ಯ ಪೂಜೆ ಮಾಡುತ್ತಿರುವುದು ಕಂಡುಬರುತ್ತದೆ.

ಏಕಾಂತ ರಾಮಯ್ಯನ ಕುರಿತ ಶಾಸನ ಕಾವ್ಯ-ಪುರಾಣಗಳಲ್ಲಿ ಸಂಬಂಧಿಸಿದಂತೆ ಸಂಶೋಧಕರ ಕ್ಷೇತ್ರಕಾರ್ಯದಿಂದ ದೊರೆತ ಮಾಹಿತಿಗಳು, ಜನ್ಮಸ್ಥಳ, ಜನ್ಮಧಾತರ ಹೆಸರು, ಏಕಾಂತ ರಾಮಯ್ಯನ ವಿಶೇಷನ ಪ್ರಾಪ್ತಿ ವೀರಮಹೇಶ್ವರ ನಿಷ್ಠೆಯನ್ನು ಸ್ಥಳ, ಸೋಮೇಶ್ವರ ದೇವಾಲಯವನ್ನು ನಿರ್ಮಿಸಿದ ಸ್ಥಳ

ಇತ್ಯಾದಿಗಳು ಐತಿಹಾಸಿಕ ಪ್ರತೀಕವಾಗಿವೆ. ಅಲ್ಲದೆ ಏಕಾಂತ ರಾಮಯ್ಯನು ಜೈನರ ವಿರುದ್ಧ ಹೊರಾಡಿ ತಲೆಯನ್ನರಿದುಕೊಂಡು ಏಳು ದಿನದ ನಂತರ ಮರಳಿ ಪಡೆದ ಪವಾಡ ಘಟನೆಗಳು ರಾಮಯ್ಯನ್ನು ಕೈಗೊಂಡ ಶೈವ ಮತ ಪ್ರಸಾರದ ಉದ್ದೇಶದ ಸಾಂಕೇತಿಕ ರೂಪವೆಂದು ಹೇಳಬಹುದು.

**ಅಡಿಟಿಪ್ಪಣಿ**

೧) ಶೇಷನವರತ್ನ. ಜಾಗತಿಕ ಧರ್ಮಗಳು, ಪುಟ ೯೯, ೧೦೦

೨) ಶಿವರುದ್ರಸ್ವಾಮಿ. ಡಾ. ಎಸ್.ಎನ್. ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ. ಪುಟ ೨೨೯

೩) ಅದೇ ಪುಟ ೨೨೯

೪) ಶೇಷನವರತ್ನ. ಜಾಗತಿಕ ಧರ್ಮಗಳು, ಪುಟ ೧೨೫

೫) ಶಿವರುದ್ರಸ್ವಾಮಿ. ಡಾ. ಎಸ್.ಎನ್. ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ. ಪುಟ ೨೩೨

೬) ದೀಕ್ಷಿತ್. ವಿ.ಜಿ, ಜ್ಞಾನಾನಂದ.ಜಿ. ಮೂರುಜಾವಿ ದೇವರ ಚರಿತ್ರೆ, ಪುಟ ೮೪

೭) ಮುನಿಶ್ರೀ ೧೦೮. ಕುಮುದನಂದಿ ಮಹಾರಾಜರು. ಅನೇಕಾಂತವಾದ ಮತ್ತು ಸ್ವಾದ್ವಾದ. ಪುಟ ೧

೮) ಅದೇ ಪುಟ ೨

೯) ಅದೇ ಪುಟ ೪

೧೦) ಅದೇ ಪುಟ ೫

೧೧) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ, ಪುಟ ೮೪

೧೨) ಎ.ಸಿ.ರೈಸ್. ಸಂಪುಟ XI, ಪುಟ ೨೭೪

೧೩) ಸುಂಕಾಪುರ ಎನ್.ಎಸ್. ಮಹಾಕವಿ ಹಂಪೆಯ ಹರಿಹರದೇವನಕೃತ ನೂತನ ಪುರಾತನ ರಗಳೆಗಳು, ಪುಟ ೨೪೩

೧೪) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ, ಪುಟ ೪೮

೧೫) ಅದೇ. ಪುಟ ೪೯

೧೬) ಬಸವರಾಧ್ಯ ಎನ್. ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ ,ಪುಟ ೫೮

೧೭) ಸುಂಕಾಪುರ ಎನ್.ಎಸ್. ಮಹಾಕವಿ ಹಂಪೆಯ ಹರಿಹರದೇವನಕೃತ ನೂತನ ಪುರಾತನ ರಗಳೆಗಳು, ಪುಟ –೨೪೦

೧೮) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ, ಪುಟ ೫೧

೧೯) ಅದೇ ಪುಟ ೫೧

೨೦) ಅದೇ ಪುಟ ೫೪

೨೧) ಅದೇ ಪುಟ ೫೪

೨೨) ರಮೇಶ್.ಕೆ.ವಿ. ಕರ್ನಾಟಕ ಶಾಸನ ಸಮೀಕ್ಷೆ. ಬೆ.ವಿ.ವಿ. ಪುಟ ೩೮

೨೩) ಸೌ.ಇ.ಇ. ಸಂಪುಟ I–IX. ಪುಟ ೧೭೫

೨೪) ಗೀತಾ ಬಿ.ಎಸ್. ಕರ್ನಾಟಕ ಸಾಂಸ್ಕೃತಿಕ ಸಂಘರ್ಷ ಒಂದು ಅಧ್ಯಯನ. ಪುಟ ೬೮

೨೫) ಸೌ.ಇ.ಇ ಸಂಪುಟ XV, ಧಾರ,ಅಣ್ಣಿಗೇರಿ ೫೯

೨೬) ಗೀತಾ ಬಿ.ಎಸ್. ಕರ್ನಾಟಕ ಸಾಂಸ್ಕೃತಿಕ ಸಂಘರ್ಷ ಒಂದು ಅಧ್ಯಯನ. ಪುಟ ೬೨

೨೭) ಸುಂಕಾಪುರ ಎನ್.ಎಸ್. ಮಹಾಕವಿ ಹಂಪೆಯ ಹರಿಹರದೇವನಕೃತ ನೂತನ ಪುರಾತನ ರಗಳೆಗಳು, ಪುಟ ೨೯೧

೨೮) ಹಿರೇಮಠ ಆರ್.ಸಿ, ಕಲಬುರ್ಗಿ ಎಂ.ಎಂ. ಕನ್ನಡ ಶಾಸನಗಳ ಸಂಪದ. ಪುಟ ೮೫

೨೯) ಕನ್ನಡ ವಿ,ವಿ ಸಂಪುಟ ೧೧. ಶಾ.ಸಂ ೮೪

೩೦) ಎ.ಇ. ಸಂಪುಟ V, ಪುಟ ೨೪೬

## ಅಧ್ಯಾಯ ೪ ಏಕಾಂತ ರಾಮಯ್ಯನ ಕುರಿತ ಶಾಸನಗಳು ಮತ್ತು ಅವನ ಪರಂಪರೆ

೪.೧ ಅಬ್ಬಲೂರು ಶಾಸನ

೪.೨ ಬಂದಳಿಕೆ ಶಾಸನ

೪.೩ ಭೋಗಾವಿ ಶಾಸನ

೪.೪ ಏಕಾಂತ ರಾಮಯ್ಯನ ಕೊನೆಯ ಜೀವಿತದ ಕಾಲ

೪.೫ ಮೂರುಜಾವಿ ಮಠದ ಪರಂಪರೆಯ ಹಿನ್ನೆಲೆಯಲ್ಲಿ ಏಕಾಂತ ರಾಮಯ್ಯ

# ಅಧ್ಯಾಯ ೪

## ಏಕಾಂತ ರಾಮಯ್ಯನ ಕುರಿತ ಶಾಸನಗಳು ಮತ್ತು ಅವನ ಪರಂಪರೆ

### ೪.೧ ಅಬ್ಬಲೂರು ಶಾಸನ ಕ್ರಿ.ಶ. ೧೨೦೦

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಿಂದ ಉತ್ತರಕ್ಕೆ ೧೨ಕಿ.ಮಿ. ದೂರದಲ್ಲಿ ಹಂಸಬಾವಿ ಹೋಬಳಿಯಲ್ಲಿ ಅಬ್ಬಲೂರು ಎಂಬ ಗ್ರಾಮದಲ್ಲಿ ಏಕಾಂತ ರಾಮಯ್ಯ ಕುರಿತ ಶಾಸನ ಕಂಡುಬರುತ್ತವೆ.

**ಸೋಮೇಶ್ವರ ದೇವಾಲಯದ ಕಟ್ಟೆಯ ಗೋಡೆಯ ಬಲಗಡೆ ಇರುವ ಶಾಸನ** [೧]

"ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಯ್ಯ ಬಸದಿಯ ಜಿನನೊಡ್ಡವಾಗಿ ತಲೆಯನರಿದ ಹಡೆಯ ಠಾವು. ಸಂಕಗಾವುಂಡ ಬಸದಿಯನೊಡೆಯಲೀಯದೆ ಆಳು ಕುದುರೆಯನೊಡ್ಡಿರಲು ಏಕಾಂತದ ರಾಮಯ್ಯ ಕಾದಿ ಗೆಲ್ದು ಜಿನನೊಡೆದು ಲಿಂಗಮಂ ಪ್ರತಿಷ್ಠೆ ಮಾಡಿದಂ"

**ಸೋಮೇಶ್ವರ ದೇವಾಲಯದ ಒಳಮಂಟಪದ ಬಾಗಿಲ ಬಲಗೋಡೆಯ ಶಾಸನ** [೨]

ಈ ಶಾಸನದ ಕಾಲ ಕ್ರಿ.ಶ.೧೨೦೦ "ಯೇ(ಏ)ಕಾಂತದ ರಾಮಯ್ಯಂಗಳ್ ಜಿನನ ಹೊಡೆದು ಲಿಂಗ ಪ್ರತಿಷ್ಠೆಯಂ ಮಾಡಿದ ಠಾವು"

**ಸೋಮನಾಥ ದೇವಾಲಯದ ಒಳಗೋಡೆ ಶಾಸನ** [೩]

ಈ ಮೇಲಿನ ಶಾಸನವು, ಏಕಾಂತ ರಾಮಯ್ಯ ಜೈನರೂಂದಿಗೆ ವಾದಕ್ಕೆ ನಿಂತು ಶಿರಸ್ಸು ಪವಾಡ ಮೆರದ ಘಟನೆಯನ್ನು ತಿಳಿಸುತ್ತದೆ. ಅಲ್ಲದೆ ಈ ಶಾಸನದಲ್ಲಿ ಬೇರೆ ಶರಣರ ಹೆಸರುಗಳು ಕಂಡುಬರುತ್ತವೆ.

**ಸೋಮೇಶ್ವರ ದೇವಾಲಯದ ಒಳಮಂಟಪದ ಬಾಗಿಲ ಬಲಗಡೆ ಶಾಸನ** [೪]

ಈ ಮೇಲಿನ ಶಾಸನವು, 'ಶ್ರೀಮದ್ ಏಕಾಂತ ರಾಮಯ್ಯಂಗೆ ಸಂಕಗೌಂಡನ ಓಲೆಯ ಕೂಡುವ ಠಾವು'

**ಅಬ್ಬಲೂರಿನ ದೇವಾಲಯಗಳು**

೧. ಬ್ರಹ್ಮೇಶ್ವರ ದೇವಾಲಯ

೨. ಸೋಮೇಶ್ವರ ದೇವಾಲಯ

**ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯ**

ಬ್ರಹ್ಮೇಶ್ವರ ದೇವಾಲಯವು ಕಾಳಾಮುಖ ಪರಂಪರೆಯ ಕೇಂದ್ರವಾಗಿತ್ತು. ಶಾಸನಗಳಲ್ಲೂ ಈ ಊರನ್ನು ಅಬ್ಬಲೂರು ಎಂದು ಉಲ್ಲೇಖಿಸಿದೆ. ಆರನೇ ವಿಕ್ರಮಾದಿತ್ಯನ ಅಧಿಕಾರಿಗಳಲ್ಲಿ ಒಬ್ಬನಾದ ಬರ್ಮ ಅಥವಾ ಬ್ರಹ್ಮ ಕ್ರಿ.ಶ. ೧೧೦೦ ರಲ್ಲಿ ನಿರ್ಮಿಸಿರುವುದರಿಂದ ಬ್ರಹ್ಮೇಶ್ವರಲಿಂಗ ಎಂದು ಕರೆಯಲಾಗಿದೆ. ಪ್ರಧಾನ ಗರ್ಭಗೃಹದಲ್ಲಿ ಲಿಂಗ(ಬ್ರಹ್ಮೇಶ್ವರ) ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ವಿಷ್ಣುವಿನ ಶಿಲ್ಪ, ಪೂರ್ವ ದಿಕ್ಕಿನ ಗರ್ಭಗೃಹದಲ್ಲಿ ಐದು ಅಡಿ ಎತ್ತರದ ಸೂರ್ಯ ಶಿಲ್ಪವನ್ನು ಕಾಣುತ್ತೇವೆ. ಈ ತ್ರೈಪುರುಷ ದೇವಾಲಯದ ದಕ್ಷಿಣಕ್ಕೆ ಸರಸ್ವತಿ ಮಂದಿರವಿದೆ. ಉತ್ತಾರಾಭಿಮುಖವಾದ ಈ ಮಂದಿರವು ಚೌಕಾಕಾರದ ಗರ್ಭಗೃಹವನ್ನು ಹೊಂದಿದ್ದು, ಮಧ್ಯದಲ್ಲಿ ಹಂಸ ಪೀಠದಮೇಲೆ ಕುಳಿತ ಚತುರ್ಭುಜ

ಸರಸ್ವತಿಯ ವಿಗ್ರಹವಿದೆ. ಗರ್ಭಗೃಹದ ಎರಡು ಪಕ್ಕದ ಕೋಣೆಗಳಲ್ಲಿ ಕೋಣೆಗಳಂತಹ ರಚನೆಗಳಿವೆ. ಈ ಕೋಣೆಗಳು ಗ್ರಂಥಾಲಯಗಳಾಗಿರಬಹುದು. ಬಹಶಃ ಇಲ್ಲಿಯೇ ಕಾಳಾಮುಖ ಸ್ಥಾಪನಚಾರ್ಯರು ಅಧ್ಯಯನ-ಅಧ್ಯಾಪನದಲ್ಲಿ ತೊಡಗಿರುತ್ತಿದ್ದಿರಬಹುದು. ದೇವಾಲಯದ ಸುತ್ತಲೂ ಹಲವಾರು ಪೌರಾಣಿಕ ಪ್ರಸಂಗಗಳು ಮತ್ತು ರಾಮಾಯಣದ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಮೂಲದಲ್ಲಿ ಪ್ರತಿಯೊಂದು . ಗರ್ಭಗೃಹದ ಮೇಲೆ ಶಿಖರಗಳಿದ್ದಿರಬಹುದು. ಈಗ ಕೇವಲ ಪ್ರಧಾನ ಗರ್ಭಗೃಹದ ಮೇಲೆ ಮಾತ್ರ ಶಿಖರವಿದೆ. ಈ ದೇವಾಲಯ ಮತ್ತು ಮಠ ಬಳ್ಳಿಗಾವಿಯ ಕೇದಾರೇಶ್ವರ ಮಠದ ಯತಿ ಪರಂಪರೆಯವರ ಮೇಲ್ವಿಚಾರಣೆಯಲ್ಲಿತ್ತು.

ಬಳ್ಳಿಗಾವೆಯು ವಿದ್ಯಾ ದಾನಕ್ಕೆ ಪ್ರಸಿದ್ಧವಾಗಿದ್ದು, ಅಲ್ಲಿಯ ಯತಿಗಳೇ ಇಲ್ಲಿಯೂ ಕಾರ್ಯನಿರ್ವಹಿಸುತ್ತಿದ್ದುದರಿಂದ ಇಲ್ಲಿಯೂ ಅದೇ ರೀತಿಯ ವಿದ್ಯಾ ದಾನ ನೆಡೆಯುತ್ತಿದ್ದಿರಬಹುದೆಂದು ಹೇಳಬಹುದು. ಇಲ್ಲಿಯ ಸ್ಥಾಪನಾ ಚಾರ್ಯನಾದ ಸೋಮೇಶ್ವರನು ತರ್ಕ, ವಾಗ್ಮಿತೆ, ನಾಟಕ, ಕಾವ್ಯ ವ್ಯಾಕರಣ ಎಲ್ಲದರಲ್ಲಿಯೂ ಪರಿಣತನಾಗಿದ್ದಾನೆ.

ಕ್ರಿ.ಶ.೧೧೪೪ರ ಅಬ್ಬಲೂರು ಶಾಸನದಲ್ಲಿ ಏಚಗಾವುಂಡನಮಗ ಬೊಮ್ಮಗಾವುಂಡನು ದಾನ ಬಿಡುವ ಸಂದರ್ಭದಲ್ಲಿ ಮೂವರು ಕೋಣೆಯ ಸಂತತಿಯ ಜ್ಞಾನಶಕ್ತಿ ಪಂಡಿತ ದೇವರ ಕಾಲು ತೊಳೆದು ಕೊಟ್ಟಿರುವನು. ಈ ದೇವಾಲಯಕ್ಕೆ ಸಂಬಂಧಿಸಿದ ಎರಡು ಶಾಸನಗಳಲ್ಲಿ ಮಠ ಮತ್ತು ತಪೋಧನರ, ವಿದ್ಯಾರ್ಥಿಗಳ ಆಹಾರ ದಾನಕ್ಕೆಂದು ದಾನ ನೀಡಲಾಗಿದೆ. ಈ ಆಧಾರಗಳಿಂದ ಇದೊಂದು ಕಾಳಾಮುಖರ ಪ್ರಮುಖ ಕೇಂದ್ರ ಮತ್ತು ವಿದ್ಯಾಲಯವಾಗಿತ್ತೆಂದು ಸ್ಪಷ್ಟವಾಗುತ್ತದೆ.

ಬ್ರಹ್ಮೇಶ್ವರ ದೇವಾಲಯವು ಪುರಾಣದಲ್ಲಿ ಮತ್ತು ಶಾಸನದಲ್ಲಿ ಬರುವ ಏಕಾಂತ ರಾಮಯ್ಯನು ತನ್ನ ಶೈವಧರ್ಮದ ಉಳಿವಿಗಾಗಿ ತನ್ನ ಶಿರವನ್ನು ಪಣವಾಗಿಟ್ಟು ಮರಳಿ ಪಡೆದ ಘಟನೆಯು ಈ ದೇವಾಲಯದಲ್ಲಿ ನೆಡೆಯುತ್ತದೆ. ನಂತರ ಜೈನರ ದಬ್ಬಾಳಿಕೆಯನ್ನು ತಡೆದು ಶೈವಧರ್ಮವನ್ನು ಕಾಪಾಡಿದ ಮಹಾ ಪುರಷನಾಗಿ ಶಾಸನದಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಪ್ರತಿ ವರ್ಷವೂ ಶ್ರಾವಣಮಾಸದಲ್ಲಿ ಏಕಾಂತ ರಾಮಯ್ಯನ ಪುರಾಣವನ್ನು ಪೂಜಾರಿಗಳು ಹೇಳುತ್ತಾರೆ. ಏಕಾಂತ ರಾಮಯ್ಯನು ಶಿರಸ್ಸು ಪವಾಡ ಮಾಡಿಕೊಂಡ ಜಾಗದಲ್ಲಿ ಬಾವಿ ಇತ್ತು ಈಗಲೂ ಸಹ ಈ ಬಾವಿ ಇದೆ ಎಂದು ಸ್ಥಳಿಯರು ಹೇಳುತ್ತಾರೆ. ಅಲ್ಲದೆ ಶಿರಸ್ಸು ಪವಾಡ ಮಾಡಿಕೊಂಡ ಜಾಗದಲ್ಲಿ ಏಕಾಂತ ರಾಮಯ್ಯನ ಸಮಾಧಿ ಇರಬಹುದೆಂದು ಜನರ ಅಭಿಪ್ರಾಯವಾಗಿದೆ. ಏಕಾಂತ ರಾಮಯ್ಯನು ಕೊನೆಗೆ ಶೈವಧರ್ಮದ ಶ್ರೇಷ್ಟತೆಯನ್ನು ಮೆರೆದು ಸೋಮೇಶ್ವರ ದೇವಾಲಯವನ್ನು ಸ್ಥಾಪಿಸಿ ಕೈಲಾಸವಾಸಿಯಾಸ ಎಂಬುದು ಪುರಾಣದಲ್ಲಿ ಹೇಳಲಾಗಿದೆ.

ಬ್ರಹ್ಮೇಶ್ವರ ದೇವಾಲಯದ ಒಳಗೆ ಇರುವಂತ ದೇವರುಗಳೆಂದರೆ, ಬ್ರಹ್ಮೇಶ್ವರ ಲಿಂಗ, ಬಸವೇಶ್ವರರ ನಂದಿ ವಿಗ್ರಹ, ಸೂರ್ಯ ನಾರಾಯಣ ವಿಗ್ರಹ, ಆಧಿನಾರಾಯಣ ವಿಗ್ರಹ, ಸಪ್ತಮಾತೃಕೆಯ ವಿಗ್ರಹ, ಗಣೇಶನ ವಿಗ್ರಹ, ಆದಿಶಕ್ತಿಯ ವಿಗ್ರಹ, ಮುಂತಾದವುಗಳನ್ನು ನೋಡಬಹುದು.

**ಸೋಮೇಶ್ವರ ದೇವಾಲಯ**

ಈ ದೇವಾಲಯವು ಮೂರು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ನವರಂಗಕ್ಕೆ ಹೊಂದಿಕೊಂಡಂತೆ ರಕ್ಷಾಸನವಿರುವ ಸಭಾ ಮಂಟಪವಿದೆ. ಸಭಾ ಮಂಟಪಕ್ಕೆ ಮೂರು ದಿಕ್ಕುಗಳಿಂದ ಪ್ರವೇಶ ದ್ವಾರಗಳಿವೆ. ನವರಂಗದ ಹೊರಬಾಗಕ್ಕೆ ಹಿಕ್ಕೆಲಗಳಲ್ಲಿಯೂ ಜಾಲಂಧ್ರಗಳಿದ್ದು ಅದರ ಪಟ್ಟಿಕೆಗಳಲ್ಲಿ ಏಕಾಂತ ರಾಮಯ್ಯನ ಪವಾಡ ಮತ್ತು ಅವನ ಜೀವನದ ಘಟನಾವಳಿಗಳನ್ನು ತಿಳಿಸುವ ಉಬ್ಬು ಶಿಲ್ಪಗಳನ್ನು ಚಿತ್ರಿಸಲಾಗಿದೆ. ಗರ್ಭಗೃಹದ ಬಾಗಿಲುವಾಟದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ದೇವಾಲಯಕ್ಕೆ ಶಿಥಿಲಾವಸ್ಥೆಯಲ್ಲಿರುವ ಇಟ್ಟಿಗೆಯ ಏಳು ತಲಗಳ ಕದಂಬ–ನಾಗರ ಶಿಖರವಿದೆ. ದೇವಾಲಯದ ಮುಂದೆ ಎತ್ತರದ ಪ್ರವೇಶ ಮಂಟಪವಿದ್ದು ಅದರಿಂದ ಗುಡಿಯನ್ನು ಪ್ರವೇಶಿಸಬಹುದು. ಗರ್ಭಗೃಹದಲ್ಲಿ ಸುಮಾರು ನಾಲಕ್ಕೂ ಅಡಿ ಎತ್ತರವಿರುವ ಸೋಮೇಶ್ವರ ಲಿಂಗವಿದೆ. ಲಿಂಗದ ಎದುರಿಗೆ ಸುಕನಾಸಿಯ ಭಾಗದಲ್ಲಿ ನಂದಿ ಶಿಲ್ಪವನ್ನು ಇಡಲಾಗಿದೆ. ಅಕ್ಕ ಪಕ್ಕದ ಗರ್ಭಗೃಹಗಳು ಮುಖ್ಯ ಗರ್ಭಗೃಹಕ್ಕಿಂತ ಚಿಕ್ಕದಾಗಿದ್ದು, ಈ ಎರಡು ಗರ್ಭಗೃಹಗಳಲ್ಲಿ ಏಕಾಂತ ರಾಮಯ್ಯ ಮತ್ತು ಅಗ್ನಿಹೊನ್ನಯ್ಯರ ಲಿಂಗಗಳನ್ನು ಕಾಣಬಹುದು. ಸಭಾ ಮಂಟಪದ ಜಾಲಾಂಧ್ರದ ಪಟ್ಟಿಕೆಗಳಲ್ಲಿ ಏಕಾಂತ ರಾಮಯ್ಯನ ಜೀವನದ ಘಟನಾವಳಿಗಳನ್ನು ಚಿತ್ರಿಸಲಾಗಿದೆ. ಅಲ್ಲಿರುವ ಶಾಸನಗಳು ಏಕಾಂತ ರಾಮಯ್ಯನ ಸಾಹಸ ಮತ್ತು ಜೀವನ ಕ್ರಮವನ್ನು ಉಲ್ಲೇಖಿಸುತ್ತವೆ.[೫]

**೪.೨ ಬಂದಳಿಕೆ ಶಾಸನ ಕ್ರಿ.ಶ.೧೨೦೭**

ಬಂದಳಿಕೆ ಅಥವಾ ಬಂದನಿಕೆ ಎಂದು ಶಾಸನದಲ್ಲಿ ಕರೆಯಲ್ಪಡುತ್ತಿದ್ದು ಈ ಸ್ಥಳ ನಾಗರಖಂಡ–೭೦ ಎಂಬ ಪಟ್ಟಣವಾಗಿದ್ದು, ಜೈನಧರ್ಮ ಹಾಗೂ ಕಾಳಾಮುಖ ಶೈವಪಂಥದ ಪ್ರಮುಖ ಕೇಂದ್ರವಾಗಿತ್ತು. ಈ ನೆಲೆಯಲ್ಲಿ ಕ್ರಿ.ಶ. ೭ನೆ ಶತಮಾನದಿಂದ ೧೨ನೆ ಶತಮಾನದ ವರೆಗೆ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಳ ಚೂರ್ಯ, ಹೊಯ್ಸಳ, ಸೇವುಣ ಮತ್ತು ವಿಜಯನಗರದ ಕಾಲದಲ್ಲಿಯೂ ಪ್ರಮುಖ ನಗರವಾಗಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ.

ಏಕಾಂತ ರಾಮಯ್ಯನ ಕಾಲದ ನಂತರ ಆತನ ವಂಶದ ಉಲ್ಲೇಖವು, ಕ್ರಿ.ಶ.೧೨೦೭ರ ಬಂದಳಿಕೆ ಶಾಸನದಲ್ಲಿ ಕಂಡುಬರುತ್ತದೆ. ಈ ಶಾಸನವು ಅಗ್ರಹಾರದ ಮಹಾಜನರಿಗೆ ಬಿಟ್ಟ ದತ್ತಿಯನ್ನು ಹೇಳುತ್ತಾ 'ಏಕಾನ್ತದ ರಾಮಯಂಗಳ ಮಂಮ ರಾಮದೇವರ ದೇವರ ವೃತ್ತಿ' ಎಂದು ರಾಮಯ್ಯನ ಮೊಮ್ಮಗ ರಾಮದೇವ ಭಟ್ಟನ ಉಲ್ಲೇಖ ಮಾಡುತ್ತದೆ. ಈ ಶಾಸನದ ಪ್ರಕಾರ ಏಕಾಂತ ರಾಮಯ್ಯನಿಗೆ ರಾಮದೇವ ಭಟ್ಟನೆಂಬ ಮೊಮ್ಮಗ ಇರುವುದು ಕಂಡುಬರುತ್ತದೆ.

ಅಲ್ಲದೆ ಅಬ್ಬಲೂರು ಶಾಸನದ ಪ್ರಕಾರ ಏಕಾಂತ ರಾಮಯ್ಯನ ತಂದೆಯಾದ ಪರುಷೋತ್ತಮ ಮೂಲದಲ್ಲಿ ಶೈವ ಬ್ರಾಹ್ಮಣನಾಗಿದ್ದನೆಂದು ಈ ಶಾಸನವು ತಿಳಿಸುತ್ತದೆ. ಬಂದಳಿಕೆ ಶಾಸನವು ಏಕಾಂತ ರಾಮಯ್ಯನ ಮುಂದಿನ ಪೀಳಿಗೆಗೆ ಸಂಬಂಧಿಸಿದ ಮಾಹಿತಿಯನ್ನು ನೀಡುತ್ತದೆ.

### ೪.೩ ಭೋಗಾವಿ ಶಾಸನ ಕ್ರಿ.ಶ.೧೨೦೦ನೆ ಶತಮಾನ

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಿಂದ ಉತ್ತರಕ್ಕೆ ೧೮ಕಿ.ಮಿ. ದೂರದಲ್ಲಿ ಹಂಸಬಾವಿ ಹೋಬಳಿಯಿಂದ ೩ಕಿ.ಮಿ. ಮತ್ತು ಅಬ್ಬಲೂರು ಗ್ರಾಮದಿಂದ ೮ ಕಿ.ಮಿ. ದೂರದಲ್ಲಿ ಭೋಗಾವಿ ಎಂಬ ಗ್ರಾಮದಲ್ಲಿ ಏಕಾಂತ ರಾಮಯ್ಯ ಕುರಿತ ಶಾಸನ ಕಂಡುಬರುತ್ತವೆ.

ಇಲ್ಲಿ ೧೨ನೆ ಶತಮಾನದ ಕಾಲದ ಏಕಾಂತ ರಾಮಯ್ಯನಿಗೆ ಸಂಬಂಧಿಸಿದ ಶಾಸನವು ಕಲ್ಲೇಶ್ವರ ದೇವಾಲಯದ ಮುಂದೆ ಕಂಡುಬರುತ್ತದೆ. ಅಬ್ಬಲೂರು ಶಾಸನದಲ್ಲಿ ಈ ಊರನ್ನು ಹಿಂದೆ 'ಗೋಗಾವೆ' ಎಂದು ಕರೆಯಲಾಗುತ್ತಿತ್ತು. ಗೋಗಾವೆ ಎಂಬುದು ಊರಿಗಿರುವ ಪ್ರಾಚೀನ ಹೆಸರಾಗಿದೆ ೧೭ನೆ ಶತಮಾನದ ಶಾಂತನಿರಂಜನ ಕವಿಯು ತನ್ನ ಅಬ್ಬಲೂರು ಚರಿತೆ ಕಾವ್ಯದಲ್ಲಿ ಈ ಊರನ್ನು ಭೋಗಾವಿ ಎಂದು ಹೆಸರಿಸಲಾಗಿದೆ. ಅಂದರೆ ಗೋಗಾವೆ ಹೆಸರು ೫ನೆ ಶತಮಾನ ಕಳೆಯುವುದರಲ್ಲಿಯೇ 'ಭೋಗಾವಿ ಎಂದು ಬದಲಾಗಿದೆ.

ಇದು ಗೋಗಾವೆ ಎಂಬ ಊರು ಮೊದಲು ಗೋವುಗಳಿಂದ ಕೂಡಿದ ಊರಾಗಿತ್ತು ಎಂದು ಹೇಳಲಾಗಿದೆ. ನಿರ್ದಿಷ್ಟದಲ್ಲಿರುವ 'ಗೋ' ಎಂಬುದು ಗೋವುಗಳು ಶಬ್ದ ಸಂಕ್ಷಿಪ್ತರೂಪವಾಗಿದೆ. ಗೋಗಾವೆ ಎಂದರೆ ಗೋ ಸಂಪತ್ತಿನಿಂದ ಕೂಡಿದ ಊರು ಎಂದಾಗುತ್ತದೆ. ಈ ಭೋಗಾವಿ ಶಾಸನವು ಈ ಊರಿನ ಕಲ್ಲೇಶ್ವರ ದೇವಾಲಯದ ಮುಂದೆ ಇದೆ. ಈ ಶಾಸನವು ಏಕಾಂತ ರಾಮಯ್ಯನ ಕುರಿತು ತಿಳಿಸುತ್ತದೆ. ಇದು ಒಂದು ಆ ಪ್ರಕಟಿತ ಶಾಸನವಾಗಿದೆ. ಇದನ್ನು ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗದ ಪ್ರಾಧ್ಯಾಪಕರಾದ ಡಾ. ಕಲವೀರ ಮನ್ವಾಚಾರ ಅವರು ಪ್ರಸ್ತುತ ಅವಧಿಯಲ್ಲಿ ಅಧ್ಯಯನ ಮಾಡುತ್ತಿದ್ದಾರೆ.

### ೪.೪ ಏಕಾಂತ ರಾಮಯ್ಯನ ಕೊನೆಯ ಜೀವಿತದ ಅಂಶಗಳು ಹಾಗೂ ಪರಂಪರೆ

ಅಬ್ಬಲೂರು ಶಾಸನದ ನಾಯಕ ಏಕಾಂತ ರಾಮಯ್ಯ ಶೈವರ ಒಂದು ಏಳಿಗೆಗೆ ಶ್ರಮಿಸಿ ನಂತರ ಏಕಾಂತ ರಾಮಯ್ಯ ಎಲ್ಲಿಗೆ ಹೋದ? ಎಂಬ ಪ್ರಶ್ನೆ ಮೂಡುತ್ತದೆ. ಇದಕ್ಕೆ ಯಾವುದೆ ಕಾವ್ಯ, ಪುರಾಣಗಳು, ಶಾಸನಗಳು ಇವುಗಳಲ್ಲಿ ಹೆಚ್ಚು ಮಾಹಿತಿ ಲಭ್ಯವಾಗುವುದಿಲ್ಲ. ಇದಕ್ಕೆ ಸಂಬಂಧಿಸಿದಂತೆ ಸಂಶೋಧಕರು ಕೆಲವು ಪೂರಕವಾದ ಮಾಹಿತಿಯನ್ನು ಒದಗಿಸಿಕೊಟ್ಟಿದ್ದಾರೆ.

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಶಿರಾಳಕೊಪ್ಪ ಸಮೀಪದ ತಾಳಗುಂದ ಹಾಗೂ ಮಾಳಗನಕೊಪ್ಪ ಎಂಬ ಊರುಗಳಿವೆ. ಆ ಊರಿನ ವಾಯುವ್ಯ ದಿಕ್ಕಿನಲ್ಲಿ ಏಕಾಂತ ರಾಮಯ್ಯನ ಗದ್ದುಗೆ ಇರುವುದು ಕಂಡುಬರುತ್ತದೆ. ಈ ಸ್ಥಳವು ಕಾನನ ಮದ್ಯದಲ್ಲಿ ದುರ್ಗಮವಾದ ಪ್ರದೇಶದಲ್ಲಿದೆ, ಈ ಪ್ರದೇಶವನ್ನು ಜನ ಈಗಲೂ ಏಕಾಂತ ರಾಮಯ್ಯನ ಗುಡ್ಡ ಅಥವಾ ಮರಡಿ ಎಂದು ಕರೆಯುತ್ತಾರೆ. ಇಲ್ಲಿ ಒಂದು ಗವಿಯಲ್ಲಿ ಸಮಾಧಿ ಇರುವುದು

ಕಂಡುಬರುತ್ತದೆ. ಇದೇ ಏಕಾಂತ ರಾಮಯ್ಯ ಐಕ್ಯಗೊಂಡ ಸ್ಥಳವಾಗಿದೆ ಎಂದು ಸಂಶೋಧಕರು ಹೇಳಿದ್ದಾರೆ. ಈ ಸ್ಥಳದಲ್ಲಿ ಒಂದು ವಿಗ್ರಹವಿದೆ ಇಲ್ಲಿನ ಜನರು ಈ ವಿಗ್ರಹಕ್ಕೆ ಏಕಾಂತ ರಾಮಯ್ಯ ಎಂದು ಕರೆಯುತ್ತಾರೆ. ಇದನ್ನು ನೋಡಿದರೆ ಏಕಾಂತ ರಾಮಯ್ಯ ತನ್ನ ಕೊನೆಯ ಕಾಲದಲ್ಲಿ ಇಲ್ಲಿಗೆ ಬಂದಿದ್ದು ತನ್ನ ಜೀವನವನ್ನು ಶಿವ ಧ್ಯಾನದಿಂದ ಕಳೆದು ಕಾಲವಾಗಿರಬಹುದೆಂದು ಸಂಶೋಧಕರು ತಿಳಿಸಿದ್ದಾರೆ. ಅಲ್ಲದೆ ಈ ಗದ್ದುಗೆಯ ಸುತ್ತಮುತ್ತಲ ವಾತಾವರಣವನ್ನು ಗಮನಿಸಿದಾಗ ಬಿಲ್ವ ಪತ್ರೆಯ ಮರಗಳು ಕಂಡುಬರುತ್ತವೆ. ಇಲ್ಲಿನ ಪ್ರದೇಶದ ಸುತ್ತಮುತ್ತಲಿನ ಊರುಗಳಾದ ತಾಳಗುಂದ, ಮಾಳಗನಕೊಪ್ಪ, ಶಿವಳ್ಳಿ ಮುಂತಾದ ಊರುಗಳಿಂದ ಜನರು ಇಲ್ಲಿಗೆ ಬಂದು ಪೂಜೆಯನ್ನು ಮಾಡಿ ತಮ್ಮ ಕೊರಿಕೆಯನ್ನು ಕೇಳಿಕೊಂಡು ಬರುತ್ತಾರೆ. ಇಲ್ಲಿನ ಜನರಿಗೆ ಈ ಗದ್ದುಗೆಯು ಒಂದು ಪವಿತ್ರ ಸ್ಥಳವಾಗಿ ಕಂಡುಬರುತ್ತದೆ. ಇಲ್ಲಿನ ಜನರು ತಮ್ಮ ಮಕ್ಕಳಿಗೆ ಏಕಾಂತ ಅಥವಾ ರಾಮಯ್ಯ ಎಂಬ ಹೆಸರುಗಳನ್ನು ಸೂಚಿಸುವ ಪ್ರತೀತಿ ಇದೆ. ಏಕಾಂತ ರಾಮಯ್ಯನ ಗದ್ದುಗೆಯು ಅಲ್ಲಮ ಪ್ರಭು, ಗೊಗ್ಗಯ್ಯ, ಮುಕ್ತಾಯಕ್ಕ, ಅಜಗಣ್ಣ ಮುಂತಾದ ಶರಣ ಶರಣೆಯರು ನೆಲೆಸಿದ್ದ ಪ್ರದೇಶವಾದ ಬಳ್ಳಿಗಾವಿಯ ಹತ್ತಿರದಲ್ಲಿದೆ. ಏಕಾಂತರಾಮಯ್ಯನ ಘಟನೆಯ ನಂತರ ಅಬ್ಬಲೂರ ಸುತ್ತಮುತ್ತಲ ವಾತಾವರಣವು ಶೈವಮಯವಾಗಿರುವುದರಿಂದ ಈ ಪ್ರದೇಶವನ್ನು 'ಶೈವರಬೆಳಗೋಳವೆಂದು' ಕರೆಯಬಹುದು.

ಏಕಾಂತ ರಾಮಯ್ಯನ ನಂತರ ಅವನ ವಂಶಪರಂಪರೆಯ ಬಗ್ಗೆ ಯಾವುದೆ ಕಾವ್ಯ ಪುರಾಣಗಳಲ್ಲಿ ಮಾಹಿತಿ ದೊರೆಯುವುದಿಲ್ಲ. ಅಲ್ಲದೆ ಕೆಲವೂ ಶಾಸನಗಳಲ್ಲಿ ಅಲ್ಪಸ್ವಲ್ಪ ಪುರಾವೆಗಳು ಸಿಗುತ್ತವೆ. ಏಕಾಂತ ರಾಮಯ್ಯನ ಕಾಲದನಂತರ ಆತನ ವಂಶದ ಉಲ್ಲೇಖ ಕ್ರಿ.ಶ. ೧೨೦೭ರ ಬಂದಳಿಕೆ ಶಾಸನದಲ್ಲಿ ಕಂಡುಬರುತ್ತದೆ. ಈ ಶಾಸನವು ಅಗ್ರಹಾರದ ಮಹಾಜನರಿಗೆ ಬಿಟ್ಟ ದತ್ತಿಯನ್ನು ಹೇಳುತ್ತಾ, 'ಏಕಾನ್ತದ ರಾಮಯಂಗಳ ಮಂಮ ರಾಮದೇವ ಭಟ್ಟರ ವೃತ್ತಿ'[೬] ಎಂದು ರಾಮಯ್ಯನ ಮೊಮ್ಮಗ ರಾಮದೇವ ಭಟ್ಟನ ಉಲ್ಲೇಖ ಮಾಡಿದೆ. ಅಲ್ಲದೆ ಅಬ್ಬಲೂರು ಶಾಸನದ ಪ್ರಕಾರ ಏಕಾಂತ ರಾಮಯ್ಯನ ತಂದೆಯಾದ ಪುರುಷೋತ್ತಮ ಮೂಲದಲ್ಲಿ ಶೈವ ಬ್ರಾಹ್ಮಣನಾಗಿದ್ದನು. ಇದು ಶಾಸನದಲ್ಲಿ ಉಲ್ಲೇಖವಾಗಿದೆ. ರಾಮಯ್ಯನು ಶೈವಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ್ದರು ಶೈವಧರ್ಮದ ಶೈವಧರ್ಮಅವಲಂಭಿಯಾಗಿ ಶೈವಮತದ ಪ್ರಸಾರದಲ್ಲಿ ಮಹತ್ತರದ ಪಾತ್ರವಹಿಸಿದ್ದನೆಂಬುದನ್ನು ಗಮನಿಸಬಹುದು. ಆದರೆ ರಾಮಯ್ಯನ ಕುಟುಂಬದವರು ಮತ್ತೆ ಶೈವ ಬ್ರಾಹ್ಮಣ ಮತವನ್ನೆ ಸ್ವೀಕರಿಸಿದರು ಎಂಬುವುದು ಈ ಶಾಸನದಲ್ಲಿ ವ್ಯಕ್ತವಾಗುತ್ತದೆ. ಆದಾಗ್ಯೂ ಮುಂದಿನ ಶತಮಾನಗಳಲ್ಲಿ ರಾಮಯ್ಯನ ವಂಶಪರಂಪರೆಯವರೂ ವೀರಶೈವ ಮತವನ್ನೇ ಅವಲಂಭಿಸಿದ್ದರು ಎಂಬುವುದು ಕ್ರಿ.ಶ. ೧೫ನೇ ಶತಮಾನದ ಕೆಂಪನಾಪುರ

ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಏಕಾಂತ ರಾಮಯ್ಯನ ಪರಂಪರೆಯ ವ್ಯಕ್ತಿಗಳ ಬಗ್ಗೆ ಉಲ್ಲೇಖ ದೊರೆಯುತ್ತದೆ.

'.....ಶ್ರೀಮದ್ವೀರ ಸೋಮೇಶ್ವರ ದ್ವಾದಶಾವತಾರ ಶ್ರೀ ವೀರಭದ್ರ ನಿಜ ಸ್ವರೂಪ ಶ್ರೀ ಮದೇಕಾಂತ ರಾಮೇಶ್ವರಾನ್ವಯೊದ್ಭೂತ ಸಕಲ ಶಾಸ್ತ್ರ ಪಾರವಾರ ಪಾರಂಗತ ವೀರಶೈವ ಮತಸ್ಥಾಪನಾಚಾರ್ಯ ಶೃ(ಶ್ರು)ತಿ ಸ್ಮೃತೀತಿ ಹಾಸ ಪುರಾಣಾಗಮ ತಾತ್ಪರ್ಯ ಪ್ರತಿಪಾದಿತಾ..... ಶ್ರೀ ಮದೇಕಾಂತ ಬಸವೇಶ್ವರ ದೇವರು'[೭] ಎಂಬುದು ತಿಳಿದುಬರುತ್ತದೆ.

ಈ ವಿವರಣೆಯಿಂದ ಏಕಾಂತ ಬಸವೇಶ್ವರರ ವ್ಯಕ್ತಿಯು ಘನವ್ಯಕ್ತಿಯುಳ್ಳವನೂ ವೀರಶೈವ ಧರ್ಮ ಪ್ರಸಾರಕನು ಆಗಿದ್ದನೂ ಎಂಬುವುದು ತಿಳಿದುಬರುತ್ತದೆ. ಏಕಾಂತ ರಾಮಯ್ಯನ ವಂಶ ಸುಮಾರು ೩೦೦ ವರ್ಷಗಳ ತರುವಾಯವೂ ಅದೇ ನಿಷ್ಠೆ, ಘನತೆ ವ್ಯಕ್ತಿತ್ವ ಎತ್ತರದಲ್ಲಿ ಬದುಕ್ಕಿದ್ದುದು ವೈಶಿಷ್ಠಪೂರ್ಣವಾಗಿದೆ. ರಾಮಯ್ಯ ಎಂಬ ಹೆಸರು ರಾಮಯ್ಯನ ನಂತರ ಕಾಲದಲ್ಲಿ ಮನೆತನದ ಹೆಸರಾಗಿಬೇಕೆಂದು ಸಂಶೋಧಕರು ತಿಳಿಸಿದ್ದಾರೆ.

ಏಕಾಂತ ರಾಮಯ್ಯನು ವೀರಶೈವ ಧರ್ಮದವನಲ್ಲ ಶೈವ ಧರ್ಮದವನು, ಎಂಬುವುದಕ್ಕೆ ಅಬ್ಬಲೂರು ಚರಿತೆಯಲ್ಲಿ ಕವಿ ಅಂತರವಳ್ಳಿಯವನು. ಮುರುಜಾವಿ ದೇವನನ್ನು ಮುಖ್ಯವಾಗಿಟ್ಟುಕೊಂಡು ಅದನ್ನೇ ಹೋಗಳಿ ಘಟನೆಯು ನೆಡೆದಿದೆ ಎಂಬಂತೆ ಕವಿ ಶಾಂತ ನಿರಂಜನನು ಚಿತ್ರಿಸಿದ್ದಾನೆ. ಇದರ ಪ್ರಕಾರ ಶಾಂತ ನಿರಂಜನ ಕವಿಯೂ ಕಾಳಾಮುಖ ಪರಂಪರೆಗೆ ಸೇರಿದವನು ಇವನೂ ಶೈವಧರ್ಮದವನು ಎಂಬುವುದು ಸ್ಪಷ್ಟವಾಗುತ್ತದೆ.

ನೆಸ್ವಿ ಚರಿತೆಯಲ್ಲಿ ಗಮನಿಸುವುದಾದರೆ ನೆಸ್ವಿಗೆ ಬರುವಷ್ಟರಲ್ಲಿ ಕತ್ತಲೆಯಾಯಿತು. ಹಾಗಾಗಿ ಅಲ್ಲಿ ಮೂರುಜಾವಿ ದೇವ ಸೂರ್ಯನನ್ನು ನಿಲ್ಲಿಸಿದನೆಂಬ ಉಲ್ಲೇಖ ಬರುತ್ತದೆ. ಈ ಘಟನೆ ಎಲ್ಲಿಯೇ ನಡೆದಿರಲಿ ಮೂರುಜಾವಿ ದೇವನೂ ಸೂರ್ಯೊಪಾಸಕನಾಗಿದ್ದರಿಂದ, ಸೂರ್ಯನನ್ನು ನಿಲ್ಲಿಸಿದನೆಂದು ತಿಳಿಯುತ್ತದೆ. ಈ ಸೂರ್ಯೊಪಾಸನೆಯನ್ನು ಮೂರುಜಾವಿ ಮಠಗಳಲ್ಲಿ ಇಂದಿಗೂ ಕಾಣುತ್ತೇವೆ. ಹಿರೇಕೆರೂರು ತಾಲೂಕಿನ ನೆಸ್ವಿಯಲ್ಲಿ ಕಮ್ಮಾರ ವೀರಬೋಮ್ಮಪ್ಪನವರು ಶಿರಸ್ ಪವಾಡ ಮಾಡಿದ್ದರೆಂದು, ಕೆಳಗೆ ಬಿದ್ದ ಶಿರವು ಕಲ್ಲಾಗಿ ಈಗಲೂ ಆಕಲ್ಲು ರಟ್ಟೆಹಳ್ಳಿಯ ವೀರಭದ್ರೇಶ್ವರ ದೇವಾಸ್ಥಾನದಲ್ಲಿ ಪೂಜೆ ಪುನಸ್ಕಾರ ಮಾಡುತ್ತಿರುವುದನ್ನು ಕಾಣಬಹುದು. ಘಟನೆಯ ನಂತರ ವೀರ ಬೊಮ್ಮಪ್ಪನವರು ಬದುಕಿಉಳಿದ ನೆಸ್ವಿಯಲ್ಲಿ ನೆಲೆಸಿದ್ದರೆಂದು, ಅವರ ವಂಶಸ್ಥರು ನೆಸ್ವಿಯಲ್ಲಿ ನೆಲೆಸಿದ್ದಾರೆ. ಅವರ ಮನೆಯಲ್ಲಿ ಇಂತಹ ಹಲವು ಪವಾಡಗಳು ನೆಡದಿರುವು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಅಂತರವಳ್ಳಿ ಅಥವಾ ನೆಸ್ವಿ ಎಲ್ಲಿಯೇ ಈ ಘಟನೆ ನೆಡದಿರಲಿ ಇದು ಶೈವ ಮತದ ಏಳಿಗೆಯನ್ನು ಸೂಚಿಸುತ್ತದೆ. ಹೀಗೆ ಐತಿಹ್ಯಗಳು ನಮ್ಮ ಸಂಸ್ಕೃತಿಯ ಕುರುಹುಗಳಾಗಿ ಕಂಡುಬರುತ್ತವೆ.

ಕಾಳಮುಖ ಪರಂಪರೆಗೆ ಸಂಬಂಧಿಸಿದಂತೆ ಚಿಕ್ಕೇಶ್ವರ ಯತಿಗಳು ಈ ವಂಶದವರೆಂದು ತಿಳಿದಿಬರುತ್ತದೆ. ಇವರು ಮೂರುಜಾವಿ ಪರಂಪರೆಗೆ ಸೇರಿದವರೆಂದು ತಿಳಿಯಬಹುದು. ಕ್ರಿ.ಶ.೧೭೫೦ ರಲ್ಲಿದ್ದ ಶಾಂತ ನಿರಂಜನನು ರಚಿಸಿದ ಅಬ್ಬಲೂರು ಚರಿತೆಯಲ್ಲಿ ಮೂರುಜಾವುದ ಎಂಬುವುದು ಚಿಕ್ಕೆಶ್ವರ ಯತಿಯ ಬಿರುದು ಎಂದು ಹೇಳಿದ್ದಾರೆ. ಇಡಿ ಕಾವ್ಯದ ಉದ್ದಕ್ಕೂ ಅಲ್ಲಲ್ಲಿ ಚಿಕ್ಕೇಶ್ವ ಯತಿಯ ಸ್ತುತಿ ಇರುವದು ಕಂಡುಬರುತ್ತದೆ. ಇಲ್ಲಿ ಶಾಂತ ನಿರಂಜನನು ಕಾವ್ಯದ ಪ್ರಾರಂಭದಲ್ಲಿಯೇ ತಾನೂ ಅಂತರವಳ್ಳಿ ನಿವಾಸಿ ಎಂದು 'ವಿಶ್ವ ಬ್ರಾಹ್ಮಣರ ಸಂದೋಹದಿ ತಾಪಿರಿದ ತಿಲತಿರ್ದ ಶಿವಭಕ್ತಗುರು ವಂಶೋದ್ಭಾವನಾದ ಚಿಕ್ಕೇಶ ಹದಿನೆಂಟು ಪೀಠ ಸ್ಥಿತ ವರ ಚಿಕ್ಕೇಶ್ವರ ಧ್ಯಾನಿಪೆನು'[೮] ಎಂದು ಹೇಳಿಕೊಂಡಿದ್ದಾನೆ.

ಪ್ರಾರಂಭದಲ್ಲಿ ತನ್ನ ವಂಶದ ದೇವರನ್ನು ಸ್ತುತಿಸಿ ಕಾವ್ಯರಚನೆಗೆ ತೊಡಗಿದ್ದಾನೆ. ಹೀಗಾಗಿ ಶಾಂತ ನಿರಂಜನನು ವಿಶ್ವಬ್ರಾಹ್ಮಣ ಮತದವನು ಎಂದು ಹೇಳಬಹುದು. ಈ ಸಾಂಗತ್ಯ ಕೃತಿಯ ಪ್ರಕಾರ ಅಬ್ಬಲೂರಿನಲ್ಲಿ ನೆಡೆದ ಏಕಾಂತ ರಾಮಯ್ಯನ ಶೀರ ಪಾರಮಯ್ಯದಲ್ಲಿ ಅವನ ರುಂಡವನ್ನು ಹೊನ್ನ ಹರಿವಾಣದಲ್ಲಿಟ್ಟು ಶೈವ ಕ್ಷೇತ್ರಗಳನ್ನು ಸಂದರ್ಶಿಸಲು ಹೊತ್ತುತಂದ ಅಗ್ಗಣಿಯ ಹೊನ್ನ ತಂದೆಗಳು ಅಂತರವಳ್ಳಿಯಲ್ಲೆದ್ದ ವಿಶ್ವ ಬ್ರಾಹ್ಮಣ ಮತದ ಚಿಕ್ಕೇಶ ಯತಿಯನ್ನು ಕಾಣುತ್ತಾರೆ. ಇಲ್ಲಿ ರಾಮಯ್ಯನ ಪಣದ ವಿವರವನ್ನು ತಿಳಿಸಿ ಈ ದಿನ ಕೊನೆಯದಿನ ಅಸ್ತಂಗತವಾಗುವ ಸೂರ್ಯನನ್ನು ತಡೆದು ಈ ಕಾರ್ಯದಲ್ಲಿ ರಾಮಯ್ಯನನ್ನು ಜಯಶೀಲನಾಗುವಂತೆ ಮಾಡಬೇಕೆಂದು ಪ್ರರ್ಥಿಸುತ್ತಾರೆ.

ಚಿಕ್ಕೇಶ್ವರನು "ಶಿವಬ್ರಾಹ್ಮೇಣೇಕಾಂತರಾಮ ಜೈನರಿಗಾದ
ವಿವರ ಪೇಳಿ ಭಾಸ್ಕರಗೆ
ದಿವಸೇಳು ತುಂಬುಗೊಂಡದೆ ಮೂರುಜಾವಕ್ಕೆ ತವಕದಿಂ
ಮರಳಿ ಬಾಯೆಂದಂ"[೯]

ಎಂದು ಅಪ್ಪಣೆ ಮಾಡುತ್ತಾರೆ. ರಾಮಯ್ಯ ತನ್ನ ಕಾರ್ಯದಲ್ಲಿ ಜಯಶೀಲನಾಗುತ್ತಾನೆ. ಅಂದಿನಿಂದ ಚಿಕ್ಕೇಶ್ವರ ಯತಿಗೆ ಮೂರುಜಾವುದ ದೇವಾ ಎಂಬ ಪರ್ಯಾಯ ಹೆಸರು ಲಭಿಸುತ್ತದೆ ಎಂಬ ವಿವರವನ್ನು ಕಾವ್ಯದಲ್ಲಿ ನೋಡಬಹುದು.

ಏಕಾಂತ ರಾಮಯ್ಯನ ವೀರಮಹೇಶ್ವರ ನಿಷ್ಠೆಯನ್ನು ಕಂಡು ಬಿಜ್ಜಳನು ಅಬ್ಬಲೂರು, ದೂಪದಹಳ್ಳಿ, ನೂಲಗೇರಿ, ನೆಸ್ವಿ, ಭೋಗಾವಿ ಊರುಗಳನ್ನು ದತ್ತಿಕೊಟ್ಟನು. ಈ ಕ್ರಿಯೆಗೆ ಸಹಾಯ ಮಾಡಿದ ಚಿಕ್ಕೇಶ್ವರರಿಗೆ ಬಿಜ್ಜಳನು ಅಂತರವಳ್ಳಿ, ಆಲದಕಟ್ಟೆ, ಸುಂಕದಪುರ, ಮಾಗೋಡು, ನಿಟ್ಟೂರು ಮುಂತಾದ ಊರುಗಳನ್ನು ದತ್ತಿಯಾಗಿ ನೀಡಿದನೆಂಬ ವಿವರ ಶಾಂತನಿರಂಜನ ಕಾವ್ಯದಲ್ಲಿದೆ. ಈಗಲೂ ಈ ಊರಗಳನ್ನು ಅಂತರವಳ್ಳಿಯ ಪರಿಸರದಲ್ಲಿ ಕಾಣಬಹುದು.

**ಏಕಾಂತ ರಾಮಯ್ಯನು ಜೀವಿಸಿದ್ದ ಕಾಲದಬಗ್ಗೆ ವಿಭಿನ್ನರೀತಿಗಳಲ್ಲಿ ಸಂಶೋಧಕರು ಪ್ರತಿಪಾದಿಸಿದ್ದಾರೆ.**

- ಕವಿಚರಿತೆಕಾರರು ಏಕಾಂತ ರಾಮಯ್ಯ ಅಥವಾ ಏಕಾಂತದ ರಾಮಿ ತಂದೆ ಸುಮಾರು ಕ್ರಿ.ಶ.೧೧೬೦ ಎಂದು ಹೇಳಿದ್ದಾರೆ.
- ಏಕಾಂತ ರಾಮಯ್ಯನನ್ನು ಕುರಿತ ಅಬ್ಬಲೂರು ಶಾಸನ ಕ್ರಿ.ಶ.೧೨೦೦ಕ್ಕೆ ಸೇರಿದ್ದು ಎಂದು ಶಾಸನಕಾರರು ಊಹಿಸಿದ್ದಾರೆ.
- ಫ.ಗು. ಹಳಕಟ್ಟಿಯವರು ಏಕಾಂತದ ರಾಮಯ್ಯನ ಕಾಲದಬಗೆಗೆ ಬಸವೇಶ್ವರನ ಸಮಕಾಲಿನನು ಆದರೂ ಅವನಿಗಿಂತಲೂ ಸ್ವಲ್ಪಕಾಲ ಹಿಂದಿನವನು ಮತ್ತು ಅವನ ತರುವಾಯ ಸಹ ಅನೇಕ ವರ್ಷಗಳ ಕಾಲ ಜೀವಿಸಿದ್ದನೆಂದು ಹೇಳುತ್ತಾರೆ.
- ಏಕಾಂತ ರಾಮಯ್ಯನು ಕದಂಬ ಕಾಮದೇವನೆಂಬ (ಕ್ರಿ.ಶ.೧೧೮೧ ರಿಂದ ೧೨೧೬) ರಾಜನಿಂದ ಸಂಭಾವಿತನಾದನೆಂದು ತಿಳಿದುಬರುವುದರಿಂದಲೂ ಆದಯ್ಯನು ಏಕಾಂತದ ರಾಮಯ್ಯನನ್ನು ತನ್ನ ಎರಡು ವಚನಗಳಲ್ಲಿ ಸ್ಮರಿಸಿರುವುದರಿಂದ ಇವರೆಲ್ಲ ಬಸವ ಕಾಲಾಂತ್ಯದಲ್ಲಿ ಎಂದರೆ ೧೨ನೇ ಶತಮಾನದ ಉತ್ತರಾರ್ಧದಿಂದ ೧೩ನೇ ಶತಮಾನದ ಆದಿಭಾಗದ ಅವದಿಯೊಳಗೆ ಜೀವಿಸಿದ್ದು ವೀರಶೈವ ಧರ್ಮದ ಪ್ರಸಾರವು ಪ್ರತಿಷ್ಠೆಯು ಕುಗ್ಗದಂತೆ ಅವರ ಐಕ್ಯದ ಅನಂತರದಲ್ಲಿಯೂ ಇದ್ದರೆಂದು ಹೇಳಬಹುದು.
- ಅಬ್ಬಲೂರು ಶಾಸನದಲ್ಲಿ ಕಲಚೂರಿ ದೊರೆ ಬಿಜ್ಜಳ ಚಾಲುಕ್ಯದೊರೆ ಸೋಮೇಶ್ವರ ಹಾನಗಲ್ಲಿನ ಕದಂಬ ಕಾಮದೇವನಿಂದ ರಾಮಯ್ಯನೂ ದತ್ತಿ ಪಡೆದಿದ್ದರ ಬಗ್ಗೆ ಉಲ್ಲೇಖವಿದೆ. ಈ ದೊರೆಗಳು ಕಾಲಕ್ರಮವಾಗಿ ಸುಮಾರು ಕ್ರಿ.ಶ. ೧೧೪೦ ರಿಂದ ೧೧೬೫ ಮತ್ತು ಕ್ರಿ.ಶ. ೧೧೯೦ ರಿಂದ ೧೨೨೦ ಎಂಬುದಾಗಿ ತಿಳಿಸುತ್ತದೆ. ಹೀಗಾಗಿ ರಾಮಯ್ಯನು ಬಿಜ್ಜಳನ ಸಮಕಾಲಿನನಾಗಿದ್ದು ಮುಂದೆ ಹಾನಗಲ್ಲಿನ ಕದಂಬ ಕಾಮದೇವನವರೆಗೂ ಜೀವಿಸಿದ್ದನೆಂದು ತಿಳಿಯುತ್ತದೆ.

○ ಏಕಾಂತ ರಾಮಯ್ಯನ ಮಹೇಶ್ವರ ನಿಷ್ಠೇ ಮತ್ತು ಸಾಹಸವನ್ನು ಮೆಚ್ಚಿದ ಬಿಜ್ಜಳನು ರಾಮಯ್ಯನೂ ನಿರ್ಮಿಸಿದ ಸೋಮನಾಥ ದೇವರ ಪ್ರಸಾದ ಜೀರ್ಣೋದ್ದಾರ ಅಂಗಭೋಗ ನೈವೇಧ್ಯದ ಸಲುವಾಗಿ ಬನವಾಸಿ ಹನ್ನೆರಡು ಸಾವಿರ ಪ್ರಾಂತ್ಯದ 'ಗೋಗಾವೆ' ಎಂಬ ಗ್ರಾಮವನ್ನು ಕಾಲಂಕರ್ಚಿ ದತ್ತಿ ನೀಡಿದ್ದು ಬನವಾಸಿ ಪ್ರಾಂತ್ಯದ ಮಾಂಡಳಿಕನಾಗಿದ್ದಾಗಲೇ ಹೊರತು ಕಲ್ಯಾಣದ ಚರ್ಕವರ್ತಿಯಾಗಿರಲಿಲ್ಲ ಎಂಬುವುದನ್ನು ಗಮನಿಸಬೇಕು.

ಈ ಘಟನೆ ಕ್ರಿ.ಶ. ೧೧೪೦ ರಿಂದ ೧೧೫೦ ರ ನಡುವೆ ನಡೆದಿರಬಹುದೆಂದು ಸಂಶೋಧಕರ ಊಹೆಯಾಗಿದೆ.

ಈ ಘಟನೆಯು ಕ್ರಿ.ಶ. ೧೧೪೦–೫೦ ರ ಕಾಲದ ಬಿಜ್ಜಳನನ್ನು ಕುರಿತು ಶಾಸನಗಳಲ್ಲಿ ಕಲ್ಯಾಣದ ಚಾಲುಕ್ಯರ ಮಾಂಡಳಿಕನಾಗಿದ್ದು ಬನವಾಸಿ ಪ್ರಾಂತ್ಯದಲ್ಲಿ ಅಧಿಪತ್ಯ ನಡೆಸುತ್ತಿದ್ದ ಎಂಬುವುದು ವ್ಯಕ್ತವಾಗುತ್ತದೆ.

○ ಸಾಹಸ ಕೃತ್ಯಗಳಿಂದ ಸುತ್ತಮುತ್ತ ಪ್ರದೇಶದ ಜನರಿಂದ ಜನನೂರಾಗವನ್ನು ಗಳಿಸಿದ್ದ. ರಾಮಯ್ಯನ ಮಹಿಮೆಯನ್ನು ಆಲಿಸಿದ್ದ ಚಾಲುಕ್ಯರ ಕೊನೆಯ ದೊರೆ ಸೋಮೇಶ್ವರನು ರಾಮಯ್ಯನ ಕಾಲಂಕರ್ಚಿ ಅಬ್ಬಲೂರು ಗ್ರಾಮವನ್ನು ಉಂಬಳಿಯಾಗಿ ನೀಡುತ್ತಾನೆ. ಈ ಘಟನೆಯು ಚಾಲುಕ್ಯರನ್ನು ಆಳ್ವಿಕೆಯ ಕಾಲವಾದ ಕ್ರಿ.ಶ. ೧೧೮೧ ರಿಂದ ೧೧೮೯ರ ನಡುವೇ ನಡೆದಿರಬೇಕು. ಹಾನಗಲ್ಲಿನ ಕಾಮದೇವನನ್ನು ಕುರಿತ ಶಾಸನಗಳು ಕ್ರಿ.ಶ.೧೧೮೮ ರಿಂದ ೧೨೧೧ರ ವರೆಗೆ ಉಪಲಬ್ದಯಿರುತ್ತದೆ. ಈ ಅವಧಿಯ ವೇಳೆಯಲ್ಲಿ ಏಕಾಂತ ರಾಮಯ್ಯನ ಕಾಲಂಕರ್ಚಿ ಮಲ್ಲವಳ್ಳಿ ಗ್ರಾಮವನ್ನು ದತ್ತಿಯಾಗಿ ನೀಡಿರಬೇಕು. ಬಹುಶ: ಚಾಲುಕ್ಯ ದೊರೆ ಸೋಮೇಶ್ವರನು ದತ್ತಿ ನೀಡಿದ ಕಾಲಕ್ಕೆ ತುಸುನಂತರದಲ್ಲಿ ಉಂಬಳಿ ನೀಡಿರಬೇಕು ಹೀಗಾಗಿ ಕಳಚೂರಿ ಚಾಲುಕ್ಯ, ಕದಂಬ ದೊರೆಗಳಿಂದ ಕ್ರಿ.ಶ. ೧೧೪೦ ರಿಂದ ೧೧೯೦ರ ನಡುವೆ ಪಡೆದಿರಬೇಕು.

○ ಕದಂಬ ವಂಶದ ನಂತರ ದೊರೆ ಮಲ್ಲದೇವನು ರಾಮಯ್ಯನು ನಿರ್ಮಿಸಿದ್ದು ದೇವಾಲಯಕ್ಕೆ ದತ್ತಿ ನೀಡಿರುವ ಉಲ್ಲೇಖ ಅಬ್ಬಲೂರು ಶಾಸನದಲ್ಲಿದೆ. ಮಲ್ಲದೇವನನ್ನು ಕುರಿತ ಶಾಸನಗಳು ಕ್ರಿ.ಶ. ೧೨೧೯ ರಿಂದ ೧೨೨೧ರ ವರೆಗೆ ದೊರೆಯುತ್ತವೆ. ಈ ಅವಧಿಯಲ್ಲಿ ರಾಮಯ್ಯ ಜೀವಿಸಿದ್ದಿಲ್ಲ ಎಂದು ಹೇಳಬಹುದು.

○ ಸಂಶೋಧಕರ ಪ್ರಕಾರ ಸೋಮೇಶ್ವರ ದೇವಾಲಯದಲ್ಲಿರುವ ಶಾಸನವನ್ನು ಗಮನಿಸಿದಾಗ ಕೆಲವೂ ಪ್ರಶ್ನೆಗಳು ಮೂಡುತ್ತವೆ. ಅ) ಏಕಾಂತ ರಾಮಯ್ಯ ಈ ಶಾಸನವನ್ನು ಕೆತ್ತಿಸಿರುವನೆ?

ಆ) ಏಕಾಂತ ರಾಮಯ್ಯನ ಜೀವಿತದ ಕಾಲದಲ್ಲಿಯೇ ಈ ಶಾಸನವನ್ನು ಹಾಕಲ್ಪಟ್ಟಿತೆ? ಇ) ಏಕಾಂತ ರಾಮಯ್ಯನ ಮರಣ ನಂತರ ಈ ಶಾಸನವು ಕೆತ್ತಲ್ಪಟ್ಟಿತೆ?

ಈ ಪ್ರಶ್ನೆಗಳಿಗೆ ವಿಮರ್ಶಕರು ಉತ್ತರವನ್ನು ನೀಡುತ್ತಾರೆ. ಅಬ್ಬಲೂರು ಶಾಸನವನ್ನು ಏಕಾಂತ ರಾಮಯ್ಯನು ಕೆತ್ತಿಸಿರಲೂ ಸಾಧ್ಯವೇ ಇಲ್ಲ. ಏಕಾಂತ ರಾಮಯ್ಯ ಜೀವಿಸಿದ್ದ ಅವದಿಯಲ್ಲಿ ತೋರಿದ ವೀರ ಮಹೇಶ್ವರ ನಿಷ್ಠೆಯ ಸಾಹಸದಿಂದ ಜನಪ್ರಿಯ ವ್ಯಕ್ತಿಯಾಗಿದ್ದ. ಈ ಜನಪ್ರಿಯತೆಯ ಕುರುಹಾಗೆಯೇ ಬಿಜ್ಜಳ, ಸೋಮೇಶ್ವರ ಕಾಮದೇವನಿಂದ ದತ್ತಿಯನ್ನು ಆಜ್ಞಾಪತ್ರ, ಜಯಪತ್ರ, ತಾಮ್ರ ಪಠಗಳ ರೂಪದಲ್ಲಿ ಪಡೆದಿರಬೇಕೆಂದು ವಿಮರ್ಶಕರು ಹೇಳಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಏಕಾಂತ ರಾಮಯ್ಯನ ಕಾಲವನ್ನು ಶಾಂತ ನಿರಂಜನ ಕವಿಯೂ ರಚಿಸಿದ ಅಬ್ಬಲೂರು ಚರಿತೆಯ ಕೃತಿಯಲ್ಲಿ ಕ್ರಿ.ಶ. ೧೨೦೦ ಎಂಬುದು ಸ್ಪಷ್ಟವಾಗುತ್ತದೆ. ಇದರ ಆಧಾರದ ಮೂಲಕ ಏಕಾಂತ ರಾಮಯ್ಯನ ಕಾಲಘಟ್ಟವನ್ನು ಹನ್ನೊಂದನೆಯ ಮತ್ತು ಹನ್ನೆರಡನೆ ಶತಮಾನದ ಮಧ್ಯ ಭಾಗದಲ್ಲಿ ಜೀವಿಸಿದ್ದನೆಂದು ಶಾಸನದ ಮೂಲಕ ತಿಳಿಯುತ್ತದೆ.

**ಅಬ್ಬಲೂರು ಚರಿತೆ–ಒಂದು ಲಘು ಪುರಾಣದಲ್ಲಿ ಕಂಡುಬರುವ ಅಂಶಗಳು**

○ ಶಿವಮತ ಕ್ಷೀಣವಾಗಿ ಜೈನ–ಬೌದ್ಧ ಮತಗಳ ಹಾವಳಿ ಹೆಚ್ಚಿದೆಯಂದು ನಾರದನು ಮಹೇಶ್ವರನಿಗೆ ಭಿನ್ನವಿಸಿದ. ಶಿವನು ವೀರಭದ್ರನನ್ನು ಕರೆದು ನಿನ್ನಾಂಶದೊಳ್ಳೊಬ್ಬನನ್ನು ಹುಟ್ಟಿಸೆಂದು ಆಜ್ಞೆ ನೀಡಿದ. ವೀರಭದ್ರನು ಪುರುಷೋತ್ತಮ ಭಟ್ಟರ ಕನಸಿನಲ್ಲಿ ಬಂದು ಪುತ್ರ ಸಂತಾನವನ್ನು ಆರ್ಶಿವಧಿಸಿದರೆಂದು ಅಬ್ಬಲೂರು ಶಾಸನ ಹೇಳುತ್ತದೆ.

○ ರಾಮಯ್ಯ ಶೈವಕ್ಷೇತ್ರ ಸಂದರ್ಶನಾರ್ಥ ಪುಲಿಗೆರೆಗೆ ಬಂದು ಸೋಮನಾಥನನ್ನು ಪೂಜಿಸಿದ ಸೋಮನಾಥ ಪ್ರತ್ಯಕ್ಷನಾಗಿ ರಾಮ ನೀನು ಅಬ್ಬಲೂರಿಗೆ ಹೋಗು ಜೈನರೊಡನೆ ವಾದಿಸಿ ಶೈವಧರ್ಮವನ್ನು ಕಾಪಾಡು, ಸಮಯ ಬಂದರೆ ನಿನ್ನ ತಲೆಯನ್ನಾದರು ಪಣಕ್ಕಿಟ್ಟು ಗೆಲ್ಲು ಎಂದು ಆಜ್ಞೆ ನೀಡಿದ ಇದು ಅಬ್ಬಲೂರ ಶಾಸನದಲ್ಲಿ ಬರುತ್ತದೆ.

○ ಸಂಕಗೌಡ ನೊಂದಿಗೆ ಬಂದು ಜೈನರು ಶಿವಲಿಂಗದೆದಿರು ಜಿನ ಪಾರಮ್ಯವನ್ನು ಘೋಸಿಸನೆಂದು ಅಬ್ಬಲೂರು ಶಾಸನ ಹೇಳುತ್ತದೆ. ಲಿಂಗದ ಕಡೆಗೆ ಕಾಲುಮಾಡಿ ಮಲಗಿದ್ದನೆಂದು ಹರಿಹರನ ರಗಳೆಯಲ್ಲಿ ಬರುತ್ತದೆ. ಜೈನನೊಬ್ಬ ಕೆರಹುಗಾಲಿನಿಂದ ಶಿವದೇವಾಲಯವನ್ನು ಪ್ರವೇಶಿಸಿದನೆಂದು ಬಸವ ಪುರಾಣದಲ್ಲಿ ಕಂಡುಬರುತ್ತದೆ. ಇಲ್ಲಿ ಜಗಳಕ್ಕೆ ಕಾರಣವನ್ನು ಬೇರೆ ಬೇರೆ ರೀತಿಯಾಗಿ ಹೇಳುತ್ತದೆ.

ಎಡಬಲಕ್ಕೆ ಕೊಂಡಿರುವ ಅರ್ಧ ಚಂದ್ರಾಕಾರದ ಹರಿತ ಆಯುಧಕ್ಕೆ ಗಂಡ ಗತ್ತರಿಯೆಂದು ಹೆಸರು ಇದನ್ನೂ ಕುತ್ತಿಗೆಯ ಮೇಲೆ ಹೊದಿಸಿಕೊಂಡು ಎಡಬಲದ ಕೊಂಡಿಗಳಿಂದ ಇಳಿಬಿದ್ದ ಸರಪಳಿ ತುದಿಯನ್ನು ಕಾಲಹೆಬ್ಬರಳಿಗೆ ಕಟ್ಟಿಕೊಂಡು ಕುಳಿತು ಹಿಂದಕ್ಕೆ ಸೆಟೆದರೆ, ಕುತ್ತಿಗೆ

ಸುಲಬವಾಗಿ ಕತ್ತರಿಸುತ್ತದೆ. ಇಂತಹ ಒಂದು ಗಂಡುಗತ್ತರಿ ಲಕ್ಷ್ಮೀಶ್ವರ ನಿಂಬಯ್ಯನ ಮಠದಲ್ಲಿ ಮತ್ತು ರಟ್ಟೆಹಳ್ಳಿಯ ವೀರಭದ್ರೇಶ್ವರ ದೇವಸ್ಥಾನದಲ್ಲಿ ಇರುವುದನ್ನು ಕಾಣುತ್ತೇವೆ.

**ಏಕಾಂತ ರಾಮಯ್ಯನ ಸ್ಮಾರಕ ಮತ್ತು ಕುರುಹುಗಳು**

ಏಕಾಂತ ರಾಮಯ್ಯನು ೧೨ನೇ ಶತಮಾನದಲ್ಲಿ ಪ್ರಭಾವ ಬೀರಿದ ವ್ಯಕ್ತಿಯಾಗಿ ಕಂಡುಬರುತ್ತಾನೆ. ಇತನ ಕುರಿತ ಐತಿಹಾಸಿಕತೆಯನ್ನು ತಿಳಿಸುವ ಶಿಲ್ಪಗಳು ಮತ್ತು ಸ್ಮಾರಕಗಳು ತುಂಗಭದ್ರೆಯ ದಕ್ಷಿಣ ಭಾಗದಲ್ಲಿ ಕೆಲವೆಡೆ ದೊರೆತಿವೆಯೆಂದು ಸಂಶೋಧಕರು ಹೇಳಿದ್ದಾರೆ.

ರಾಮಯ್ಯನು ಜೈನರೊಡನೆ ಹೋರಾಡಿ ಶಿವಪಾರಮ್ಯವನ್ನು ಘೋಷಿಸುವ ಸಂದರ್ಭದಲ್ಲಿ ಘಟನೆಯ ವಿವರಗಳನ್ನು ಅಬ್ಬಲೂರಿನ ಸೋಮೇಶ್ವರ ದೇವಾಲಯದ ಕಾಟಾಂಜನದಲ್ಲಿಯ ಶಿಲ್ಪಗಳಲ್ಲಿ ಕೆತ್ತಲಾಗಿದೆ. ಅದರಲ್ಲಿ ವೀರಮಹೇಶ್ವರರ ನಿಷ್ಠೆಯ ರಾಮಯ್ಯನ ಕುರಿತ ವಿವಿಧ ಶಿಲ್ಪಗಳನ್ನು ಈಗಲೂ ದೇವಸ್ಥಾನದಲ್ಲಿ ನೋಡಬಹುದು. ಅಬ್ಬಲೂರಿನ ಸೋಮೇಶ್ವರ ದೇವಾಲಯದ ನವರಂಗದ ಬಲಗಡೆಯ ಕೊಠಡಿಯಲ್ಲಿರುವ ಬೃಹತ್ತ ಲಿಂಗವನ್ನು ಏಕಾಂತ ರಾಮಯ್ಯನ ಲಿಂಗವೆಂದು ಕರೆಯುತ್ತಾರೆ. ಮೂಳಗನ ಕೊಪ್ಪದ ಬದಿಯ ಗುಡ್ಡದಲ್ಲಿ ಗವಿಯಂತಃ ರಾಮಯ್ಯನ ಹೆಸರಿನ ಗದ್ದುಗೆ ನೊಡಬಹುದು. ಅಲ್ಲದೆ ಸಂಶೋಧಕರ ಪ್ರಕಾರ ಟಿ.ನರಸೀಪುರದ ಗಂಜಾ ನರಸಿಂಹ ದೇವಾಲಯದ ಕೈಸಾಲೇಯ ಮೇಲಿರುವ ಗಾರೆ ವಿಗ್ರಹದ ಕೆಳಗೆ ಏಕಾಂತ ರಾಮಸ್ವಾಮಿಯೆಂದು ಬರೆಯಲಾಗಿದ್ದು, ಅಂದಿನ ಜನರ ಕಲ್ಪನೆಯಲ್ಲಿದ್ದಂತಹ ಏಕಾಂತ ರಾಮಯ್ಯನ ವಿಗ್ರಹವೆಂದು ಇದುವರೆಗೂ ತಿಳಿಯಲಾಗಿದೆ. ನಂತರ ಸಂಶೋಧಕರು ಅಲ್ಲಿಹೋಗಿ ನೋಡಿ ಪರಿಶಿಲಿಸಿದಾಗ ಅದು ರಾಮಯ್ಯನದಲ್ಲ ಎಂದು ತಿಳಿದು ಬಂದಿದೆ.

ಮುಳಬಾಗಿಲ ತಾಲೂಕಿನ ಅವನೀಯ ಬೆಟ್ಟದಲ್ಲಿ ಏಕಾಂತ ರಾಮಯ್ಯನ ದೇವಾಲವಿದ್ದು ಇದು ಶಾಸನದಿಂದ ತಿಳಿಯುತ್ತದೆ.[೧೦] ಈಗಲೂ ಕೂಡಾ ಈ ಒಂದು ದೇವಾಲಯ ಇದೆ ಎಂದು ಸಂಶೋಧಕರು ತಿಳಿಸುತ್ತಾರೆ. ಈ ದೇವಾಲಯದ ಹೊರಗೋಡೆಯ ಮೇಲೆ ಆತ್ಮಲಿಂಗ ಕೈಯಲ್ಲಿ ಹಿಡಿದಿರುವ ಶರಣರ ಶಿಲ್ಪ ಮತ್ತು ಜೇಡವಿರುವ (ಬಹುಶ: ಕಾಳಾಮುಖ ವ್ಯಕ್ತಿ) ಶರಣನ ವಿಗ್ರಹದ ಶಿಲ್ಪಗಳು ಕಂಡುಬರುತ್ತವೆ. ದೇವಾಲಯ ಒಳಗೆ ಉತ್ತರ ದಿಕ್ಕಿನ ದ್ವಾರದ ಎಡಭಾಗದಲ್ಲಿ ಒಂದು ವಿಗ್ರಹವಿದೆ. ಬಹುಶ: ರಾಮಾಯ್ಯನ ವಿಗ್ರಹ ಇದಾಗಿರಬೇಕೆಂದು ಸಂಶೋಧಕರ ಅಭಿಪ್ರಾಯವಾಗಿದೆ. ದೇವಾಲಯದ ಸುತ್ತಲ ಗೋಡೆಗಳಲ್ಲಿ ಶಾಸನಗಳ ಸಮುಚ್ಚಯವು ಕಂಡುಬರುತ್ತಿದ್ದು, ಇವುಗಳಲ್ಲಿ ಬಹಳಷ್ಟು ತಮಿಳು ಭಾಷೆಯ ಶಾಸನಗಳಾಗಿವೆ. ಈ ಶಾಸನಗಳ ಕಾಲ ಕ್ರಿ.ಶ. ೧೨೩೧ ಆಗಿರುವುದರಿಂದ ಇದಕ್ಕಿಂತ ಮೊದಲೇ ಏಕಾಂತರಾಮಯ್ಯ ದೇವಾಲಯವನ್ನು ನಿರ್ಮಿಸಿದ್ದನೆಂದು ತಿಳಿದುಬರುತ್ತದೆ.

**೪.೫ ಮೂರುಜಾವಿ ಪೀಠದ ಶಾಖಾಮಠಗಳು**

ಚಿಕ್ಕೇಶ್ವರರಿಂದ ಸ್ಥಾಪಿಸಲ್ಪಟ್ಟ ಮೂರುಜಾವಿ ಮಠವು ಸನ್ಯಾಸಿ ಪೀಠವಾಗಿತ್ತು. ಇದು ಕಾಳಾಮುಖ ಪರಂಪರೆಗೆ ಸೇರಿದ ಮಠವಾಗಿದೆ. ಕಾಲಕ್ರಮೇಣ ಇದು ಸನ್ಯಾಸಿ ಪೀಠದಿಂದ ಗೃಹಸ್ಥ ಪೀಠವಾಯಿತು. ಯಾರಿಂದ ಯಾವ ಕಾಲಘಟ್ಟದಲ್ಲಿ ಸನ್ಯಾಸಿ ಪರಂಪರೆ ನಿಂತು ಹೋಯಿತು ಎಂಬುದಕ್ಕೆ ಸೂಕ್ತ

ದಾಖಲೆಗಳಿಲ್ಲ. ಗೃಹಸ್ಥ ಪೀಠವಾದ ನಂತರ ಇವರ ಮನೆತನ(ಸಂತತಿ) ದವರು ಬಿಕ್ಷಾಟನೆಗಾಗಿ ಬೇರೆ ಬೇರೆ ಪ್ರದೇಶಕ್ಕೆ ಹೋಗುತ್ತಿದ್ದರು. ಹಾಗೆ ಹೋದವರು ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ನೆಲೆ ನಿಂತಿರುವುದನ್ನು ಕಾಣಬಹುದು. ಮೂರುಜಾವಿ ಪೀಠವು ಇಂದು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ರಾಜ್ಯಗಳಲ್ಲಿ ಈ ಶಾಖಾಮಠಗಳು ಕಂಡುಬರುತ್ತವೆ.

ಶಾಂತನಿರಂಜನನು ಬರೆದ ಅಬ್ಬಲೂರು ಚರಿತೆಯಲ್ಲಿ "ಹದಿನೆಂಟು ಪೀಠಸ್ಥಿತವರ ಚಿಕ್ಕೇಶ್ವರನ ಧ್ಯಾನಿಪೆನು" ಎಂಬ ಉಲ್ಲೇಖವಿದೆ. ಶಾಂತನಿರಂಜನನ ಕಾಲ ೧೨೫೦ರ ಅಂತರವಳ್ಳಿಯ ನಿವಾಸಿ ತಾನೆಂದು ರೂಢಾಚಾರ್ಯರ ಕೃಪೆಯಿಂದ ರಚಿಸುವೆನೀ, ಈ ಕೃತಿಯನ್ನು ಎಂದು ಅವನು ಹೇಳಿಕೊಂಡಿರುದರಿಂದ ೧೭ನೇ ಶತಮಾನದಲ್ಲಿ ಅಂತರವಳ್ಳಿಯ ಮಠಕ್ಕೆ ೧೮ ಶಾಖಾಪೀಠಗಳಿದ್ದವೆಂದು ತಿಳಿಯುತ್ತದೆ.

ಅದರಲ್ಲಿ ಪ್ರಮುಖವಾಗಿ ಅಂತರವಳ್ಳಿ ಮೂರುಜಾವಿ ಮಠದಲ್ಲಿ ಪ್ರಧಾನಮಠವಾಗಿ ಕಂಡುಬರುತ್ತವೆ. ಈ ಅಂತರವಳ್ಳಿ ಮೊದಲು ಇಲ್ಲಿ ಅಸಂಖ್ಯಾತ ಅಂತರಬಳ್ಳಿಗಳಿಂದ ಕೂಡಿದ್ದರಿಂದ ಇದಕ್ಕೆ ಮೊದಲು ಅಂತರವಳ್ಳಿ (ಅಂತರಬಳ್ಳಿ) ಎಂದು ಕರೆಯುತ್ತಿದ್ದರು. ಇಲ್ಲಿ ಹಿಂದೆ ಗೌತಮ ಋಷಿಯು ತಪಸ್ಸು ಮಾಡಿದ್ದರಿಂದ ಈ ಗ್ರಾಮಕ್ಕೆ ಗೌತಮಪುರ ಎಂಬ ಹೆಸರು ಇತ್ತು. ಇದು ವಿಶ್ವಕರ್ಮರ ತೃತೀಯ ಮೂಲ ಪೀಠವಾಗಿದೆ. ಮೂರುಜಾವಿ ಪರಂಪರೆಯು ಪ್ರಥಮ ಮತ್ತು ಪ್ರಧಾನ ಪೀಠವಾಗಿದೆ. ಏಕಾಂತ ರಾಮಯ್ಯನಿಗೆ ಸಹಾಯ ಮಾಡುವುದಕ್ಕೆ ಸೂರ್ಯನ್ನು ನಿಲ್ಲಿಸಿ ಪವಾಡ ಮಾಡಿದ ಸ್ಥಳವೂ ಇದೆ. ಅಬ್ಬಲೂರು ಚರಿತೆ ಬರೆದ ಕವಿಯಾದ ಶಾಂತನಿರಂಜನ ಇದೇ ಊರಿನವನು. ಇಲ್ಲಿ ಶ್ರೀ ಮೂರುಜಾವಾಧೀಶ್ವರ ದೇವಾಲಯವಿದೆ. ಈ ದೇವಾಲಯವು ಮೂರುಜಾವಿ ದೇವರ ಶಿಷ್ಯನಾದ ಲಕುಲೀಶನದಾಗಿರಬಹುದೆಂದು ಸಂಶೋಧಕರು ಗುರುತಿಸಿದ್ದಾರೆ.

ಮೂರುಜಾವಿ ಪೀಠದಲ್ಲಿ ಹತ್ತುಜನ ಮಹಾಪುರುಷರು ಪೀಠಧಿಕಾರಿಗಳು ಇಲ್ಲಿಯವರೆಗೆ ಆಗಿಹೋಗಿದ್ದಾರೆ.

ಚಿಕ್ಕೇಶ್ವರ (ಮೂರು ಜಾವಾಧೀಶ್ವರ)

ಶ್ರೀ ಲಕುಲೀಶ

ಶ್ರೀ ಶಾಂತನಿರಂಜನ ಸ್ವಾಮಿಗಳು

ಶ್ರೀ ರೂಢ ಸ್ವಾಮಿಗಳು

ಶ್ರೀ ಕಾಳಹಸ್ತೇಂದ್ರ ಸ್ವಾಮಿಗಳು

ಶ್ರೀ ವೃಷಭೇಂದ್ರ ಸ್ವಾಮಿಗಳು

ಶ್ರೀ ಮೂರುಜಾವ ಸ್ವಾಮಿಗಳು

ಶ್ರೀ ಈಶ್ವರ ಸ್ವಾಮಿಗಳು

ಶ್ರೀ ನಿರಂಜನ ಸ್ವಾಮಿಗಳು

ಶ್ರೀ ಸೋಮಶೇಖರ ಸ್ವಾಮಿಗಳು

ಇವರಕಾಲ ಗುರುಪರಂಪರೆ ಎಲ್ಲಿಯವರು ಎಂಬ ಇತ್ಯಾದಿ ವಿವರಗಳು ತಿಳಿದುಬಂದಿಲ್ಲ. ಇವರ ನಂತರ ಬಂದ ಪೀಠಧಿಕಾರಿಗಳ ನಡುವೆ ಸುಮಾರು ವ್ಯತ್ಯಾಸವಿದೆ. ಈ ಮೂರುಜಾವಿ ಪೀಠವು ಮೊದಲು ಸನ್ಯಾಸ ಪೀಠವಾಗಿದ್ದು ನಂತರ ಸಂಸಾರ ಪೀಠವಾಗಿ ಪರಿವರ್ತನೆಯಾಗಿ ಕಂಡುಬರುತ್ತದೆ. ಇವರ ನಂತರ ಹಲವಾರು ಉಪಪೀಠಗಳನ್ನು ಮಾಡಿಕೊಂಡು ಕರ್ನಾಟಕದ ನಾನಾ ಭಾಗಗಳಲ್ಲಿ ಇವರ ಪರಂಪರೆ ಕಂಡುಬರುತ್ತದೆ. ಇಲ್ಲಿ ಕಾಳಾಮುಖ ಪರಂಪರೆಗೆ ಸೇರಿದ ಈ ಮೂರುಜಾವಿ ಮಠವು ಹಲವಾರು ಸಂಪ್ರಾದಾಯ ಮತ್ತು ಆಚರಣೆಗಳನ್ನು ಮಾಡಿಕೊಂಡು ಬಂದಿರುವುದನ್ನು ಈಗಲೂ ನೋಡಬಹುದು. ಅವರ ಕೆಲವು ಆಚರಣೆಗಳನ್ನು ಈ ಕೆಳಗಿನಂತೆ ಗಮನಿಸಬಹುದು.

○ **ಷಟ್ಕರ್ಮಗಳ ಆಚರಣೆ:**

ಈ ಪರಂಪರೆಗೆ ಸೇರಿದ ಹಲವಾರು ಋಷಿಮುನಿಗಳು, ಯತಿಗಳು ಈ ಷಟ್ಕರ್ಮಗಳ ಆಚರಣೆಮಾಡುತ್ತಾರೆ. ಯತಿಗಳಿಗೆ ದಿನನಿತ್ಯದ ಬದುಕಿನಲ್ಲಿ ಆಚರಣೆ, ವಿಧಿ-ವಿಧಾನ ಅನುಸರಿಸುವುದು ಅನಿವಾರ್ಯ ಮತ್ತು ಅಗತ್ಯವಾಗಿದೆ. ಧಾರ್ಮಿಕ ವಿಧಿ-ವಿಧಾನ ಅನುಸರಿಸುವ ಮೂಲಕ ಅವರು ಎಂತಹ ಕಠೋರ ನಿಯಮಪಾಲಕರು, ಧರ್ಮನಿಷ್ಠರು ಆಗಿದ್ದರೆಂದು ಪ್ರಸ್ತುತ ಪರಂಪರೆಯವರಿಂದ ತಿಳಿದು ಬರುತ್ತದೆ.

೧. ಯಜನ- ಯಜ್ಞಕಾರ್ಯದಲ್ಲಿ ಪಾಲ್ಗೊಳ್ಳುವುದು

೨. ಯಾಜನ -ಯಜ್ಞಮಾಡಿಸುವಿಕೆ

೩. ಅಧ್ಯಯನ- ಜ್ಞಾನಾರ್ಜನೆ

೪. ಅಧ್ಯಾಪನ- ಜ್ಞಾನದಾನ, ಪಾಠವನ್ನು ಬೋಧಿಸುವುದು

೫. ದಾನ- ಕೊಡುಗೆ-ಸ್ವತಃ ತಾನು ಬೇರೆಯವರಿಗೆ ದಾನಮಾಡುವುದು.

೬. ಪ್ರತಿಗ್ರಹ - ದಾನ ತೆಗೆದುಕೊಳ್ಳುವುದು

○ **ಸೂರ್ಯರಾಧನೆ:**

ಸೂರ್ಯನನ್ನು ತದೇಕ ಚಿತ್ತದಿಂದ ಒಂದು ಗಂಟೆಗೂ ಹೆಚ್ಚುಕಾಲ ನೋಡುವ ವಿಶಿಷ್ಟ ಆಚರಣೆಯನ್ನು ಇವರು ಆಚರಿಸುತ್ತಾರೆ. ಸೂರ್ಯ ಆರಾಧನೆಯ ಬಲದಿಂದ ಮೂರುಜಾವಿ ದೇವನು ಸೂರ್ಯನ್ನು ತಡೆದು, ನಿಲ್ಲಿಸಿ ಪವಾಡ ಮೆರೆದನೆಂಬ ಉಲ್ಲೇಖವು ಶಾಸನದಿಂದ ಸಿಗುತ್ತದೆ. ಪ್ರತಿನಿತ್ಯ ತಮ್ಮ ಪೂಜಾಕಾರ್ಯಕ್ರಮಗಳು ಮುಗಿದ ನಂತರ ಸ್ವಾಮಿಜಿಯವರು ಮಠದ ಆವರಣದಲ್ಲಿ ಸುಮಾರು ಅರ್ಧಗಂಟೆಗಳಿಗೂ ಹೆಚ್ಚುಕಾಲ ಒಂಟಿಕಾಲಿನಲ್ಲಿ ನಿಂತು, ಕೈಯಲ್ಲಿನ ಬೆರಳುಗಳ ಸಂದಿಯಿಂದ ಸೂರ್ಯನನ್ನು ತದೇಕ ದೃಷ್ಟಿಯಿಂದ ನೋಡುತ್ತಾರೆ. ಈಗ ಅಂತರವಳ್ಳಿ ಮಠದ ಸ್ವಾಮಿಜಿಯವರಿಗೆ

ವಯಸ್ಸಾಗಿರುವುದರಿಂದ ಒಂಟಿಕಾಲಿನ ಮೇಲೆ ನಿಲ್ಲುವುದಿಲ್ಲ. ಆದರೆ ವಿಶೇಷ ದಿನಗಳಂದು ಕಡ್ಡಾಯವಾಗಿ ಒಂಟಿಕಾಲಿನ ಮೇಲೆ ಕೆಲವೊತ್ತು ನಿಲ್ಲುತ್ತಾರೆ. ಇದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದೆಂದು, ಮನಸ್ಸಿನ ಚಂಚಲತೆಯನ್ನು ದೂರಾಮಾಡಿ ಏಕಾಗ್ರತೆಗೆ ಅವಶ್ಯಕವೆಂದು ಹಾಗೆ ಮಾಡುವ ಮತ್ತು ಇಷ್ಟದೇವರನ್ನು ಒಲಿಸುವ ಪರಿ ಎಂದು ಹೇಳಬಹುದು. ಸೂರ್ಯಾರಾಧಕರಾದ ಕಾಳಾಮುಖ ಆಚರಣೆಯಲ್ಲಿ ಇಂದು ಮುಂದುವರೆದಿರುವುದನ್ನು ನೋಡಬಹುದು.

○ **ರಥಸಪ್ತಮಿ ಆಚರಣೆ:**

ನಮ್ಮ ದಿನನಿತ್ಯದ ಬೆಳಕಿನ ಕಾರಣಕರ್ತ ಸೂರ್ಯನೇ ಆಗಿದ್ದಾನೆ. ಸೂರ್ಯನೇ ದೇವರು ಎಂದು ಪೂಜಿಸುವುದೇ ರಥಸಪ್ತಮಿ ಆಚರಣೆ ಆಗಿದೆ. ಮೂರು ನದಿಗಳು ಸೇರುವ ಭಾಗದಲ್ಲಿ ಸ್ನಾನಮಾಡಿ ಸೂರ್ಯನಿಗೆ ಅರ್ಘ್ಯ ನೀಡುವ ಸಂಪ್ರದಾಯ ಇದು ಮೂರು ಜಾವಿ ಮಡಿದಲ್ಲಿ ಈ ಸಂಪ್ರದಾಯದವರು ಮಾಡುತ್ತಾರೆ.

○ **ನೂಲು ಹುಣ್ಣಿಮೆ ಹಬ್ಬದ ಆಚರಣೆ:**

ಒಂದು ಆಚರಣೆಯು ಶ್ರಾವಣ ಮಾಸದಲ್ಲಿ ನಡೆಯುತ್ತದೆ. ಅಂತರವಳ್ಳಿಯ ಮೂರುಜಾವಿ ಪೀಠದ ಅಲ್ಲಿನ ಜನ ಮತ್ತು ಸಂಪ್ರದಾಯದವರು ಹಾಗೂ ಭಕ್ತರು ಮಠದ ಪೀಠಾದಿಕಾರಿಯಿಂದ ಸ್ವೀಕರಿಸಿದ ಜನಿವಾರವನ್ನು ದರಿಸಿ ಅವರ ಮನೆಗೆ ಹೊಗಿ ಹಬ್ಬದ ಆಚರಣೆ ಮಾಡುತ್ತಾರೆ. ಅದೇ ದಿನ ರಕ್ಷಾಬಂಧನವೆಂಬ ರಕ್ಷೆಕಟ್ಟುವ ಕಾರ್ಯಕ್ರಮವು ನಡೆಯುತ್ತದೆ. ಇಂದಿಗೂ ಕೂಡಾ ಈ ಪೂಜಾಪದ್ದತಿ ಆಚರಣೆಯಲ್ಲಿದೆ.

○ **ಮೌನೇಶ್ವರ ಜಯಂತಿ**

ಮೌನೇಶ್ವರನನ್ನು ಲಿಂಗದ ರೂಪದಲ್ಲಿ ಆರಂಭಿಸುವ ಪರಂಪರೆ ಪ್ರಸ್ತುತ ಮೂರುಜಾವಿ ಪರಂಪರೆಯಲ್ಲಿ ಸಾಗಿಬಂದಿದೆ.

○ **ನಂದಿ ಧ್ವಜ ವಂದನೇ**

ನಂದಿಯು ಶೈವರ ಸಂಕೇತವಾಗಿದೆ. ಯುಗಾದಿ ಹಬ್ಬದ ದಿನ ಮೂರು ಜಾವಿ ದೇವನಿಗೆ ಪಂಚಾಮೃತ ಅಭಿಷೇಕದೊಮದಿಗೆ ರುದ್ರಾಭಿಷೇಕ ಮಾಡುತ್ತಾರೆ. ಅಲ್ಲದೆ ಮೂರುಜಾವಿ ದೇವರ ಗುಡಿಯಲ್ಲಿ ಆರತಿಮಾಡಿ ಹೊಸ ಪಂಚಾಗವನ್ನು ಪೂಜಿಸುತ್ತಾರೆ. ಹಿಂದಿನ ವರ್ಷ ಮಠದ ಮುಂಧೆ ಮಹಾದ್ವಾರದ ಮೇಲೆ ಏರಿಸಲ್ಪಟ್ಟ ನಂದಿ ಧ್ವಜವನ್ನು ಕೆಳಕ್ಕೆ ಇಳಿಸಿ ಹೊಸವರ್ಷದಂದು ನಂದಿ ಧ್ವಜವನ್ನು ಮಹಾದ್ವಾರದ ಗೋಪುರದ ಕಣ್ಣಿಗೆ ಕಾಣುವಂತೆ ಕಟ್ಟುತ್ತಾರೆ. ಈ ಆಚರಣೆಗಳು ಕಂಡುಬರುತ್ತವೆ.

## ಸಂಪ್ರದಾಯಗಳು

○ **ಸಿಖೆ ಬಿಡುವುದು:**

ಮೂರುಜಾವಿ ಮಠದ ಪರಂಪರೆಯಲ್ಲಿ ಸಿಖಾಬಿಡುವ ಸಂಪ್ರದಾಯ ಇಂದಿಗೂ ಮುಂದುವರೆದಿದೆ. ಕಾಳಾಮುಖ ಸನ್ಯಾಸಿಗಳು ಉದ್ದ ಜಡೆ ಹೊಂದಿದ ಶಿಲ್ಪಿಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಸಿಖಾ ಬಿಡುವುದನ್ನು ಚಂಡಿಕೆ ಎಂದು ಕರೆಯುತ್ತಾರೆ. ಸನ್ಯಾಸಿಗಳನ್ನು ಈ ರೀತಿ ಬಿಡುವುದು ರೂಢಿ. ಸಂಸ್ಕಾರಸ್ತರು ಬಿಡುವುದಿಲ್ಲ, ಸ್ವಾಮೀಜಿಯವರು ತಲೆಯ ನೆತ್ತಿಯ ಭಾಗದಲ್ಲಿ ಕೂದಲನ್ನು ಶಿವನ ಮಾದರಿಯಲ್ಲಿ ಕಟ್ಟುತ್ತಾರೆ. ಸ್ಥಾವರಲಿಂಗ ಆರಂಭಕಾಲದ ಕಾಳಾಮುಖರು ಇದೆರೀತಿ ಸಿಖೆ ಇಟ್ಟುಕೊಂಡಿದ್ದನ್ನು ಶಿಲ್ಪಿಗಳಲ್ಲಿ ಕಾಣಬಹುದು.

○ **ಶವ ಸಂಸ್ಕಾರ ಪದ್ಧತಿ**

ಮಾನವ ಜೀವನದ ಕೊನೆಯ ಘಟ್ಟ ಸಾವು. ಸತ್ತವರ ದೇಹಕ್ಕೆ ಸಲ್ಲಿಸುವ ಗೌರವವೇ ಶವಸಂಸ್ಕಾರವಾಗಿದೆ. ಅಂತರವಾಣಿಯ ಮೂಲ ಮಠದಲ್ಲಿ ಅಗ್ನಿ ಸ್ಪರ್ಶ ಮಾಡುವ ಸಂಪ್ರದಾಯವಿದೆ. ಸಂಸ್ಕಾರಸ್ಥರಾದವರನ್ನು ಬೆಂಕಿಯಲ್ಲಿ ಸುಡುವ ವಾಡಿಕೆ ಇದೆ. ಸನ್ಯಾಸತ್ವ ಸ್ವೀಕರಿಸಿ ಅದರಲ್ಲಿ ಮುಂದುವರೆದರೆ ಅಂತಹವರನ್ನು ಮಾತ್ರ ಸಮಾಧಿ ಮಾಡಿ ಅದರ ಮೇಲೆ ಗದ್ದುಗೆ ಪೂಜೆ ಮಾಡುತ್ತಾರೆ.

○ **ಗದ್ದುಗೆ ಪೂಜೆ**

ಮೂರುಜಾವಿ ಮಠದ ಆವರಣದಲ್ಲಿ ಸನ್ಯಾಸಿಗಳಾಗಿದ್ದ ನಾಲ್ಕು ಸ್ವಾಮಿಗಳು ಗದ್ದುಗೆಗಳಿವೆ. ಭೋಜೆಂದ್ರ ಸ್ವಾಮಿಜಿಗಳ, ಮೂರುಜಾವಿ ದೇವ ಸ್ವಾಮಿಗಳು, ನಿರಂಜನ ಸ್ವಾಮಿಗಳು, ಫಣೀಂದ್ರಸ್ವಾಮಿಗಳು ಗದ್ದಿಗೆಗಳಿವೇ. ದಿನನಿತ್ಯ ಆ ಗದ್ದಿಗೆಗಳನ್ನು ಪೂಜಿಸುತ್ತಾರೆ. ಇಲ್ಲಿನ ಭಕ್ತರು ತಮ್ಮ ಇಷ್ಟಸಿದ್ದಿಗಳನ್ನು ಬೇಡಿಕೊಂಡು ಪೂಜೆಯನ್ನು ಸಲ್ಲಿಸುವುದು. ಇಗಲೂ ನಡೆದು ಬರುತ್ತದೆ. ಹೀಗೆ ಒಂದು ಸಂಪ್ರದಾಯವನ್ನು ಹುಟ್ಟು ಹಾಕುವಲ್ಲಿ ಆರಾಧನೆಗಳು ಮತ್ತು ಆಚರಣೆಗಳು ಪ್ರಮುಖವಾದವುಗಳಾಗಿರುತ್ತವೆ. ಧಾರ್ಮಿಕ ಸಂಕಲ್ಪದ ಪ್ರತೀತವಾಗಿ ಇಲ್ಲಿಯ ಆರಾಧನೆಗಳು ಮತ್ತು ಆಚರಣೆಗಳು ಇರುತ್ತವೆ ಎಂಬುದಕ್ಕೆ ಕಾಳಾಮುಖ ಪರಂಪರೆಗೆ ಸೇರಿದ ಮೂರುಜಾವಿ ಮಠದ ಆಚರಣೆ ಸಾಕ್ಷಿಯಾಗಿದೆ. ಇಂದಿನ ಪರಿಸ್ಥಿತಿಯನ್ನು ಗಮನಿಸಿದರೆ ಮೂರುಜಾವಿ ಪರಂಪರೆಯವರೂ ಇಂದಿಗೂ ಅಲ್ಲಲ್ಲಿ ಕಂಡು ಬರುತ್ತಾರೆ.

ಈ ಪರಂಪರೆಯ ಗುರುಗಳು ಒಂದು ಕಾಲದಲ್ಲಿ ರಾಜಗುರುಗಳಾಗಿ ಮರ್ಯಾದೆಯನ್ನು ಸಕಲ ಸಂಪತ್ತನ್ನು ಪಡೆದು ಸಮಾಜವನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತಿದ್ದರು. ಆದರೆ ಇಂದು ಯಾವುದೇ ಪ್ರೋತ್ಸಾಹ ವಿಲ್ಲದೇ ಸರಕಾರದ ಆರ್ಥಿಕ ನೆರವು ಈ ಮಠದ

ಪರಂಪರೆಯವರಿಗಿಲ್ಲ. ಆದರೂ ಈ ಪರಂಪರೆಯ ಗುರುಗಳು ತಮ್ಮ ಬದುಕಿನ ನಿರ್ವಹಣೆಗಾಗಿ ಹೆಚ್ಚಿನ ಪರಿಶ್ರಮ ಪಡಬೇಕಾದ ಸ್ಥಿತಿಗತಿ ಇಂದು ಇದೆ. ಆದರೂ ಅವರು ಧೈರ್ಯಗೆಡದೆ ತಮ್ಮ ಸಮಾಜದ ಏಳಿಗೆಗೆ ಹಗಲಿರುಳು ಪರಿಶ್ರಮಿಸುತ್ತಾ ಧಾರ್ಮಿಕ ವೃತ್ತಿಯೊಂದಿಗೆ ಜೀವಿಸುತ್ತಿದ್ದಾರೆ.

**ಅಡಿಟಿಪ್ಪಣಿ**

೧) ಎ.ಇ. ಸಂಪುಟ XXIX.ಪುಟ ೧೪೨

೨) ಎ.ಇ. ಸಂಪುಟ V. ಪುಟ ೨೬೦-೬೧

೩) ಎ.ಇ. ಸಂಪುಟ V. ಪುಟ.೨೩೭-೬೦

೪) ಎ.ಇ. ಸಂಪುಟ XXIX ಪುಟ. ೧೪೧

೫) ಎಲ್ಲಣ್ಣ ಕೆ. ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಅ ಪ್ರಕಟಿತ ಪಿ.ಹೆಚ್.ಡಿ ಮಹಾಪ್ರಬಂಧ

ಪುಟ ೨೦೩

೬) ನಾಗಭೂಷಣ.ಸಿ. ಏಕಾಂತ ರಾಮಯ್ಯ ಮತ್ತು ಆದಯ್ಯ, ಒಂದು ತುಲನಾತ್ಮಕ ಅಧ್ಯಯನ, ಪುಟ ೬೧

೭) ಅದೇ ಪುಟ ೬೧.

೮) ಬಸವರಾಧ್ಯ ಎನ್. ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ ,ಪುಟ ೦೫

೯) ಅದೇ ಪುಟ ೮೧

೧೦) ಇ.ಸಿ. ಸಂಪುಟ ೧೭. ಪುಟ ೧೯

## ಅಧ್ಯಾಯ ೫

# ಸಮಾರೋಪ

ಶೈವಧರ್ಮವು ಪ್ರಾಚಿನ ಧರ್ಮವಾಗಿದೆ. ಎಂಬುದಕ್ಕೆ ಹಲವಾರು ಮಾಹಿತಿಗಳು ಲಭ್ಯವಾಗುತ್ತವೆ. ಈ ಧರ್ಮವು ಬಹು ಹಿಂದಿನಿಂದಲೂ ಪೂಜಿಸಿಕೊಂಡು ಬಂದಿರುವ ಒಂದು ಪಂಥವಾಗಿ ಕಂಡುಬರುತ್ತದೆ. ವೇದ, ಪುರಾಣಗಳು, ಆಗಮಗಳು, ಅನೇಕ ವಚನಕಾರರಲ್ಲಿ ಶೈವಧರ್ಮವನ್ನು ಕುರಿತು ಉಲ್ಲೇಖಗಳು ಇವೆ. ಆಗಮಗಳು ಪಶುಬಲಿಯನ್ನು ನಿರಾಕರಿಸಿ ಅಹಿಂಸೆಯನ್ನು ಒತ್ತಿ ಹೇಳುತ್ತದೆ. ಶೈವಧರ್ಮದ ಒಳಪಂಥವಾಗಿ ಲಕುಲೀಶ, ಪಾಶುಪತ, ಕಾಳಾಮುಖ ಪಂಥಗಳು ಮಹತ್ವದ ಪಾತ್ರ ಹೊಂದಿವೆ.

ಪಾಶುಪತ ಪಂಥವು ಪಶುಪತಿ ಅಥವಾ ಮಹೇಶ್ವರನಿಗೆ ಶರಣಾಗಬೇಕು ಎಂದು ತಿಳಿಸುತ್ತದೆ. ಇಲ್ಲಿ ಮನುಷ್ಯನು ಪಶುವಾಗಿ ಕಂಡು ಬಂದರೆ ಅವನನ್ನು ಕಟ್ಟಿಹಾಕಿರುವುದೇ ಪಶುಪತಿಯಾಗಿದೆ. ಲಕುಲೀಶ ಎಂಬುದು ಒಬ್ಬ ವ್ಯಕ್ತಿಯ ಹೆಸರಾಗಿ ಸೂಚಿಸುವುದರಿಂದ ಪಶುಪತಿಯು ಮುಂದೆ ಶಿವನಾದನೆಂದು ಹೇಳಬಹುದು. ಪಶುಪತಿ ಎಂಬ ಪದವನ್ನು ನಾವು ಮೊದಲಬಾರಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಕಾಣುತ್ತೇವೆ. ಶಿವನೆ ಪಶುಪತಿಯಾಗಿರುವುದು ಕಂಡುಬರುತ್ತದೆ. ಲಕುಲೀಶನು ಶ್ರೀಕಂಠನ ಶಿಷ್ಯನೆಂದು ಅವರಿಬ್ಬರೂ ಸೇರಿ ಪಾಶುಪತವನ್ನು ಸ್ಥಾಪಿಸಿದರೆಂದು ತಿಳಿಯುತ್ತದೆ. ಕರ್ನಾಟಕದಲ್ಲಿ ಪಾಶುಪತವು ಏಳನೆಯ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಹೆಚ್ಚು ಪ್ರಚಲಿತದಲ್ಲಿತ್ತು ಎಂದು ಹೇಳಬಹುದು.

ಲಕುಲೀಶನ ಪರಂಪರೆಯ ಅನುಸಾರವಾಗಿ ನೋಡುವುದಾದರೆ ಆತ್ರೇಯಸ ಗೋತ್ರದ ವಿಶ್ವರೂಪ ಮತ್ತು ಸುದರ್ಶನ ದೇವಿಯವರ ಮಗನಾಗಿ ಭೃಗುನಾಡದ ಎಲ್ಕ ಎಂಬ ಊರಿನಲ್ಲಿ ಜನಿಸಿದನೆಂದು ಹೇಳಬಹುದಾಗಿದೆ. ಅನೇಕ ಕಡೆ ಲಕುಲೀಶನ ಪ್ರತಿಮೆಗಳನ್ನು ನೋಡಿದರೆ ಆತ ಕೈಯಲ್ಲಿ ಇಡಿದಿರುವ ಬಡಿಗೆ ಅಥವಾ ಢಮರು ಕೆಲವು ಕಡೆ ಶಿಶ್ನದಂತೆ ಕಾಣುತ್ತದೆ. ಈಗಲು ಕೂಡ ಕೆಲವು ದೇವಾಲಗಳಲ್ಲಿ ಶಿಶ್ನ ಪೂಜೆಯನ್ನು ಕಾಣಬಹುದು. ಬಸವಾದಿ ಶರಣರ ಕಾಲದಲ್ಲಿ ಅವರು ಮೊದಲು ಸ್ಥಾವರ ಲಿಂಗವನ್ನು ಬಳಸಿದ್ದರು ಕೂಡ, ಅದು ನಂತರ ಇಷ್ಟಲಿಂಗವಾಗಿ ಮುಂದೆ ಪ್ರಚಾರ ಪಡೆದು ಜನಪರ ಪಂಥವಾಗಿ ಬೆಳೆಯಿತು.

ಕಾಳಾಮುಖ ಸಂಪ್ರದಾಯವು ಒಂಬತ್ತರಿಂದ ಹದಿಮೂರನೆಯ ಶತಮಾನದ ನಡುವಿನ ಕಾಲಾವದಿಯಲ್ಲಿ ಕರ್ನಾಟಕದಲ್ಲಿ ಪ್ರಮುಖ ಶಾಖೆಯಾಗಿ ಕಂಡುಬರುತ್ತದೆ. ಈ ಪಂಥವು ಲಕುಲೀಶ ಮೂರನೇ ತಲೆಮಾರಾದ 'ಕಾಲಾನನ'ನಿಂದ ಬಂದವರೆಂದು ತೀಳಿಯುತ್ತದೆ. ಪಶುಪತಿ ಪಂಥವೆ ಮುಂದುವರೆದು ಕಾಳಾಮುಖವಾಗಿ ಬೆಳೆಯಿತು ಎಂದು ಹೇಳಬಹುದು. ಕಾಳಾಮುಖದವರನ್ನು ಕಪ್ಪು

ಮುಖದವರೆಂದು ಹೇಳಲಾಗಿದೆ. ಕಾಳಾಮುಖ ಪದ್ದತಿಯಲ್ಲಿ ಅನೇಕ ಪೂಜಾಪದ್ಧತಿಯೂ ಕಂಡುಬರುತ್ತದೆ. ಕಾಳಾಮುಖರು ಪಾಶುಪತದ ಆಚರಣೆಗಿಂತ ಭಿನ್ನರಾಗಿ ಕಂಡುಬರುತ್ತಾರೆ.

ಕಾಳಾಮುಖರ ದೇವಾಲಯಗಳು ಮತ್ತು ಮಠಗಳಿಗೆ ನೀಡಿದ ದತ್ತಿಯನ್ನು ಶಾಸನಗಳಲ್ಲಿ ನೋಡಬಹುದು. ಇವರ ಕಾಲದಲ್ಲಿ ತ್ರೈಪುರುಷ ದೇವಾಲಯಗಳು ಹೆಚ್ಚಾಗಿ ಕಂಡುಬರುತ್ತವೆ. ಕಾಳಾಮುಖರಲ್ಲಿ ಪ್ರಮುಖವಾಗಿ 'ಮೂರು ಕೋಣೆಯ ಸಂತತಿ' ಎಂಬ ವಿಶೇಷ ಉಲ್ಲೇಖವನ್ನು ಶಾಸನಗಳಿಂದ ತಿಳಿಯಬಹುದು. ಇದರಿಂದ ಕಾಳಾಮುಖರು ಮೂರು ಕೋಣೆಯ ಸಂತತಿಗೆ ಸೇರಿದವರೆಂದು ತಿಳಿದುಬರುತ್ತದೆ. ಕಾಳಾಮುಖರಲ್ಲಿ ಶಕ್ತಿ ಪರಿಷತ್ ಮತ್ತು ಸಿಂಹ ಪರಿಷತ್ ಎಂಬ ಎರಡು ಶಾಖೆಗಳು ಕಂಡುಬರುತ್ತವೆ.

ಕರ್ನಾಟಕದಲ್ಲಿ ಪ್ರಮುಖವಾಗಿ ಧಾರವಾಡ, ಹಾವೇರಿ, ಶಿವಮೊಗ್ಗ ಜಿಲ್ಲೆಯಲ್ಲಿ ಈ ಶಾಖೆಗಳನ್ನು ಹೆಚ್ಚಾಗಿ ಕಾಣಬಹುದು. ಕೋಡಿಮಠ, ಬಳ್ಳಿಗಾವಿ, ಮೂರುಜಾವಿ ಮಠ, ಮುಂತಾದವು ಈ ಕಾಳಾಮುಖ ಪರಂಪರೆಗೆ ಸೇರಿದವು ಎಂಬುದು ಸ್ಪಷ್ಟವಾಗುತ್ತದೆ. ಇವು ಹೆಚ್ಚು ಗುರು ಪರಂಪರೆ ಹೊಂದಿದ ಮಠಗಳಾಗಿದ್ದವು. ಅಂದಿನ ಕಾಲದಲ್ಲಿ ಕಾಳಾಮುಖ ಮಠಗಳಾದ ಬಳ್ಳಿಗಾವಿ, ಕೋಡಿಮಠ, ಹೆಚ್ಚು ವಿದ್ಯಾಕೇಂದ್ರವಾಗಿ ಖ್ಯಾತಿ ಪಡೆದಿದ್ದವು. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯವು ಶಕ್ತಿ ಪರಿಷತ್ತಿನ ಕೇಂದ್ರವಾಗಿತ್ತು. ಈ ಕೋಡಿಮಠದಲ್ಲಿ ಗುರು ಪರಂಪರೆಗೆ ಸೇರಿದ ಸೋಮೇಶ್ವರ ಪಂಡಿತ, ಶ್ರೀಕಂಠ, ವಾಮಶಕ್ತಿ ಪಂಡಿತ, ಗೌತಮ ಪಂಡಿತ, ಮುಂತಾದ ಯತಿಗಳು ಜ್ಞಾನ ಪ್ರಸಾರವನ್ನು ಮಾಡುತ್ತಿದ್ದರು.

ಹನ್ನೆರಡನೆ ಶತಮಾನದಲ್ಲಿ ಕಾಳಾಮುಖ ಪಂಥವು ಜೈನರೊಂದಿಗೆ ಸ್ಪರ್ಧೆ ನಡೆಸಿ ಅದರಲ್ಲಿ ಮುಂದೆ ವೀರಶೈವದೊಂದಿಗೆ ಅನುಕೂಲಕರವಾಗಿ ನಡೆದುಕೊಂಡು ಬಂದಿರಬಹುದು. ಕಾಳಾಮುಖಕರು ದಿನಕಳೆದಂತೆ ಹೆಚ್ಚಿನ ಪ್ರಮಾಣದಲ್ಲಿ ವೀರಶೈವ ಧರ್ಮದಲ್ಲಿ ಲೀನವಾದರು.

ಹನ್ನೆರಡನೆಯ ಶತಮಾನದ ಕಾಲದಲ್ಲಿ ಬಿಜ್ಜಳನು ಜೈನಧರ್ಮದವನಾಗಿದ್ದು, ಆ ಕಾಲದಲ್ಲಿ ಜೈನಧರ್ಮದವರ ಪ್ರಭಾವ ಹೆಚ್ಚಾಗಿತ್ತು. ಜೈನಧರ್ಮಕ್ಕೆ ಅನ್ಯ ಮತದವರು ಮತಾಂತರ ಹೊಂದುತ್ತಿದ್ದರೆಂದು ಕಂಡುಬರುತ್ತದೆ. ಇದೇ ಘಟನೆಯು ಅಬ್ಬಲೂರಿನ ಗ್ರಾಮದಲ್ಲಿ ನಡೆದಿರುವುದು ಶಾಸನದಿಂದ ತಿಳಿಯಬಹುದು. ಶೈವಧರ್ಮದ ಉಳಿವಿಗಾಗಿ ಏಕಾಂತ ರಾಮಯ್ಯನು ಪವಾಡ ಪುರುಷನಾಗಿ ಕಂಡುಬರುತ್ತಾನೆ. ಅಬ್ಬಲೂರಿನ ಶಾಸನದ ಪ್ರಕಾರ ಏಕಾಂತ ರಾಮಯ್ಯನ ಕನಸಿನಲ್ಲಿ ಶಿವನು ಬಂದು ನೀನು ಅಬ್ಬಲೂರು ಎಂಬ ಗ್ರಾಮಕ್ಕೆ ಹೋಗು, ಅಲ್ಲಿ ಶಿವಪೂಜಕರಿಗೆ ಜೈನರಿಂದ ತೊಂದರೆಯಾಗುತ್ತಿದೆ ಇದಕ್ಕೆ ನಿನ್ನ ಶಿರವನ್ನಾದರು ಪಣಕಿಟ್ಟು ನಮ್ಮ ಶೈವ ಧರ್ಮವನ್ನು ಕಾಪಡು. ಅಲ್ಲದೆ ನೀನು ಇಡೀ ಭೂಮಂಡಲವೇ, ಕೀರ್ತಿ ಪಡೆಯುವಂತಹ ಮಹಾಪುರುಷನಾಗುತ್ತೀಯ ಎಂದು ಶಿವನು ಹೇಳುತ್ತಾನೆ.

ತನ್ನ ತಂದೆ ತಾಯಿಗಳ ಒಪ್ಪಿಗೆ ಪಡೆದು ಅಬ್ಬಲೂರು ಎಂಬ ಗ್ರಾಮದ ಬ್ರಹ್ಮೇಶ್ವರ ದೇವಾಲಯಕ್ಕೆ ಹೊಗಿ ಅಲ್ಲಿ ಪೂಜೆ ಪುನಸ್ಕಾರವಿಲ್ಲದ ದೇವಾಲಯವನ್ನು ಸ್ವಚ್ಚಗೊಳಿಸಿ ಪೂಜೆಯನ್ನು ಮಾಡಿ ಆರತಿಯನ್ನು ಬೆಳಗಿದನು. ಇದೇ ಸಂದರ್ಭದಲ್ಲಿ ಜೈನರ ಸಂಕಗೌಂಡನು ಎಂಬ ನಾಯಕ ಬಂದು ಇಲ್ಲಿ ಶಿವಪೂಜೆಯನ್ನು ಮಾಡಬಾರದು ಎಂದು ಹೇಳಿದನು. ನಂತರ ಜೈನ(ಜಿನ) ಮತ್ತು ಶೈವರ(ಶಿವ) ದೇವರ ಮೆಚ್ಚುವ ಚಿತ್ರಣ ಕಂಡುಬರುತ್ತದೆ. ನಂತರ ಏಕಾಂತ ರಾಮಯ್ಯನಿಗೂ ಮತ್ತು ಸಂಕಗೌಂಡನಿಗೂ ಉಗ್ರವಾದ ವಾದವಿವಾದಗಳು ಉಂಟಾಗತ್ತವೆ. ಕೊನೆಯಲ್ಲಿ ಜೈನರು ರಾಮಯ್ಯನಿಗೆ 'ನೀನು ನಿಜವಾದ ಶಿವಭಕ್ತನಾದರೆ ಗಂಡಗತ್ತರಿಯಿಂದ ಶಿರವನ್ನು ಕತ್ತರಿಸಿಕೊಂಡು ಏಳು ತೀರ್ಥಗಳನ್ನು ಏಳು ದಿನದಲ್ಲಿ ಚಲಿಸಿ, ಏಳುಲಿಂಗಕ್ಕೆ ನಿನ್ನ ಶಿರದ ಆರತಿಯನ್ನು ಎತ್ತಿ, ಅದನ್ನು ನೀನು ಮರಳಿಪಡೆದರೆ ನೀನೇ ನಿಜವಾದ ಶಿವಭಕ್ತ' ಅವನೇ ನಿಜವಾದ ದೇವರು ಎಂದು ಜೈನರು ಸವಾಲು ಹಾಕಿದರು. ಅಲ್ಲದೆ ನೀನು ಏಳುದಿನಕ್ಕೆ ಮರಳಿ ಶಿರವನ್ನು ಪಡೆದದ್ದೇ ಆದರೆ ಜಿನ ಮೂರ್ತಿಯ ಮೂಲವನ್ನೆ ಕೆಡಿಸಿ ನಮ್ಮನ್ನೆಲ್ಲ ಆಳಾಗಿ ಮಾಡಿಕೊಳ್ಳಬಹುದು ಎಂದು ಹೇಳಿದರು.

ಪಣದ ವಿಚಾರವಾಗಿ ಓಲೆಯನ್ನು ಬರೆದುಕೊಡುವಂತೆ ಅಲ್ಲಿನ ಜೈನರ ಪ್ರಮುಖ ಮುಖಂಡರು ಮತ್ತು ಮೂರುಜಾವಿ ಪರಂಪರೆಗೆ ಸೇರಿದ ಪುಲಿಗೆರೆಯ ಹೊನ್ನಿತಂದೆಗಳ ಸಮ್ಮುಖದಲ್ಲಿ ಪರಸ್ಪರ ಒಪ್ಪಂದವಾಯಿತು. ನಂತರ ಏಕಾಂತ ರಾಮಯ್ಯ ಶಿವನನ್ನು ನೆನೆದು ಧ್ಯಾನಿಸುತ್ತ, ಹುಲ್ಲಕಟ್ಟನ್ನು ಕತ್ತರಿಸುವಂತೆ ಸ್ವ-ಖಡ್ಗವಾದ ಗಂಡಗತ್ತರಿಯಿಂದ ಶಿರವನ್ನು ಕತ್ತರಿಸಿಕೊಂಡನು. ನಂತರ ಈ ವಿಚಾರವು ಅಬ್ಬಲೂರಿನ ಸುತ್ತ-ಮುತ್ತಲೂ ಹಬ್ಬಿತು. ನಂತರ ಪುಲಿಗೆರೆಯ ಹೊನ್ನಿತಂದೆಗಳು ಏಕಾಂತ ರಾಮಯ್ಯನ ಶಿರವನ್ನು ಹೊನ್ನಿನ ಹರಿವಾಣದಲ್ಲಿ ಇಟ್ಟುಕೊಂಡು ಏಳು ತೀರ್ಥ ಕ್ಷೇತ್ರಗಳ ದರ್ಶನಕ್ಕೆ ಹೊರಟರು.

ಮೊದಲಿಗೆ ಪುಲಿಗೆರೆಯ ಸೋಮನಾಥ, ಅಣ್ಣಿಗೆರೆ ಅಮೃತೇಶ, ಕಪ್ಪಡಿ ಸಂಗನಾಥ, ಕೆಂಭಾವಿ ಭೋಗೇಶ್ವರ, ಸೊನ್ನಲಪುರ ಸಿದ್ಧರಾಮ ಕೊನೆಯದಾಗಿ ಹಂಪೆಯ ವಿರೂಪಾಕ್ಷ ಈ ರೀತಿ ತೀರ್ಥ ಕ್ಷೇತ್ರದಲ್ಲಿ ಮಿಂದು ಏಕಾಂತ ರಾಮಯ್ಯನ ಶಿರವನ್ನು ಪೂಜಿಸಿಕೊಂಡು ಬಂದರು. ನಂತರ ಚಿಕ್ಕೇಶ್ವರ ಯತಿಗಳು ವಾಸವಿರುವ ಅಂತರವಳ್ಳಿ ಮಾರ್ಗವಾಗಿ ಬರುತ್ತಿರುವಾಗ ಸಮಯ ಮೀರಿತ್ತು. ಇದರಿಂದ ಎಲ್ಲಿ ನಾವು ಜೈನರಿಗೆ ಶರಣಾಗತರಾಗುತ್ತೇವೆ ಎಂದುಕೊಂಡ ಸಂದರ್ಭದಲ್ಲಿ ಚಿಕ್ಕೇಶ್ವರ ಯತಿಗಳು ಸೂರ್ಯದೇವನನ್ನು ಕುರಿತು ತಪಸ್ಸು ಮಾಡಿದರು.

ಭೂಮಿಗೆ ಬಂದ ಸೂರ್ಯ ಚಿಕ್ಕೇಶ್ವರ ಯತಿಗಳಿಗೆ ನಮಸ್ಕರಿಸಿ ಕಾರಣ ಕೇಳಿದಾಗ ನೆಡದ ಘಟನೆಯನ್ನು ವಿವರಿಸಿದರು. ಯತಿಗಳು ಸೂರ್ಯನಿಗೆ ಮೂರು ಜಾವಕ್ಕೆ ನೀನು ಬಂದು ನಿಲ್ಲಬೇಕು ಎಂದು ಹೇಳಿದರು. ಇದರಿಂದ ಜೈನರು ಅಬ್ಬಲೂರು ಜೈನರು ಬೆರಗಾದರು ಹಾಗೂ ಊರಿನ ಜನರೆಲ್ಲರು ಪವಾಡವನ್ನು ಮೆಚ್ಚಿ ಜನ ಕೊಂಡಾಡಿದರು. ನಂತರ ಏಕಾಂತ ರಾಮಯ್ಯನ ಶಿರವನ್ನು ಮುಂಡಕ್ಕೆ ಸೇರಿಸಿದರು. ಈ ರೀತಿಯಾಗಿ ಏಕಾಂತ ರಾಮಯ್ಯನು ಶೈವರ ಪವಾಡ ಪುರುಷನಾಗಿ

ಕಂಡುಬರುವುದನ್ನು ನಾವು ಕಾಣಬಹುದು. ನಂತರ ಜೈನರ ದೇವಾಲಯವನ್ನು ನಾಶ ಮಾಡಿ ಅಲ್ಲಿ ಶಿವನನ್ನು ಪ್ರತಿಷ್ಠಾಪನೆ ಮಾಡಿದನು.

ತನ್ನ ಶಿರವು ಒಂದಾಗಲು ಕಾರಣನಾದ ಚಿಕ್ಕೇಶ್ವರ ಯತಿಗೆ ಹೊಂದಿಸಿದನು. ಇಲ್ಲಿ ಅನೇಕ ಜೈನರು ಶೈವಧರ್ಮಕ್ಕೆ ಮತಾಂತರ ವಾದರು. ಅಲ್ಲದೆ ಈ ವಿಚಾರವನ್ನು ಕೇಳಿದ ಬಿಜ್ಜಳ ರಾಜನು ಆಗಮಿಸಿ ಇವನ ಮಹಿಮೆಯನ್ನು ಕೇಳಿ ರಾಮಯ್ಯನ ಪಾದಗಳನ್ನು ತೊಳೆದು ಸತ್ತಳಿಗೆ ೭೦ರ ಮುಳುಗುಂದ ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ ಗೋಗಾವೆ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದನು.

ಅಲ್ಲದೆ ಕಲ್ಯಾಣ ಚಾಲುಕ್ಯರ ಚಕ್ರವರ್ತಿಯಾದ ನಾಲ್ಕನೇ ಸೋಮೇಶ್ವರರು ಅರಮನೆಗೆ ಬರಮಾಡಿಕೊಂಡು ರಾಮಯ್ಯನಿಗೆ ಬರಮಾಡಿಕೊಂಡು ವೀರ ಸೋಮನಾಥ ದೇವರಿಗೆ ಪರಮೇಶ್ವರ ದತ್ತಿಯಾಗಿ ಅಬ್ಬಲೂರು ಗ್ರಾಮವನ್ನು ಕೊಟ್ಟು ಆನೆಯ ಮೇಲೆ ಕೂರಿಸಿ ಮೆರೆಸಿದರು. ನಂತರ ಕದಂಬ ಕಾಮದೇವನು ರಾಮಯ್ಯನಿಗೆ ಮಲ್ಲಳ್ಳಿ ಎಂಬ ಗ್ರಾಮವನ್ನು ದತ್ತಿಯಾಗಿ ಕೊಟ್ಟನು. ನಂತರ ಏಕಾಂತ ರಾಮಯ್ಯನು ಶಿವನ ಧ್ಯಾನಮಾಡುತ್ತಾ, ಅನೇಕ ದೇವಾಲಯಗಳನ್ನು ನಿರ್ಮಿಸಿದನೆಂದು ಹೇಳಬಹುದು. ಅಲ್ಲದೆ ಚಿಕ್ಕೇಶ್ವರ ಯತಿಗಳು ಸೂರ್ಯನನ್ನು ಮೂರುಜಾವಕ್ಕೆ ತಂದು ನಿಲ್ಲಿಸಿದ್ದರಿಂದ, ಏಕಾಂತ ರಾಮಯ್ಯನು ಶೈವಧರ್ಮದ ಕಾಳಾಮುಖರ ಮೂರುಜಾವಿ ಪರಂಪರೆಗೆ ಸೇರಿದವನು ಎಂಬುದು ಸ್ಪಷ್ಟವಾಗುತ್ತದೆ.

ಏಕಾಂತ ರಾಮಯ್ಯನ ಮರಣದ ನಂತರ ಅವನ ಪೂರ್ವಿಕರು ಅನೇಕ ಕಾರ್ಯ ಚಟುವಟಿಕೆ ಮಾಡುತ್ತಾ ಈಗಲೂ ಅವರ ಪರಂಪರೆ ಮುಂದುವರೆದಿದೆ. ಇಲ್ಲಿ ಪ್ರಮುಖವಾಗಿ ಗಮನಿಸಬಹುದಾದ ಅಂಶವೆಂದರೆ, ಈ ಘಟನೆಯು ಅಂತರವಳ್ಳಿ, ಕೋಡಿಮಠ, ಅಬ್ಬಲೂರು, ನೆಸ್ವಿ ಊರುಗಳ ಸುತ್ತ-ಮುತ್ತಾ, ಹತ್ತಿರದಲ್ಲೇ ನಡೆದಿರುವುದನ್ನು ಗಮನಿಸಿದರೆ ಏಕಾಂತ ರಾಮಯ್ಯನು ಕಾಳಾಮುಖ ಪರಂಪರೆಗೆ ಸೇರಿದವರೆಂದು ತಿಳಿಯುತ್ತದೆ.

ಅಲ್ಲದೆ ಏಕಾಂತ ರಾಮಯ್ಯನ ಶಿರಸ್ಪವಾಡ ನಡೆದ ಘಟನೆಯಂತೆ ಮತ್ತೊಂದು ಘಟನೆಯು ಹಿರೇಕೆರೂರು ತಾಲೂಕಿನ ನೆಸ್ವಿಯಲ್ಲಿ ಕಮ್ಮಾರ ವೀರಬೊಮ್ಮಪ್ಪನವರು ಶಿರಸ್ಪವಾಡ ವೀರಭದ್ರೇಶ್ವರ ದೇವಸ್ಥಾನದಲ್ಲಿ ಈಗಲೂ ಅನೇಕ ಪೂಜೆ ಪುನಸ್ಕಾರಗಳು ನಡೆಯುತ್ತಿರುವುದನ್ನು ಈಗಲೂ ಕಾಣಬಹುದು. ಇಲ್ಲಿ ಈ ಶಿರವನ್ನು ದೇವಸ್ಥಾನದಲ್ಲಿ ಇಟ್ಟು ಪೂಜೆ ಮಾಡುತ್ತಿರುವ ಕುಟುಂಬವನ್ನು ಇಂದಿಗೂ ಕಾಣಬಹುದು. ರಟ್ಟಿಹಳ್ಳಿಯವರು ಏಕಾಂತ ರಾಮಯ್ಯನ ಪರಂಪರೆಗೆ ಸೇರಿದವರು ನೆಸ್ವಿಯಲ್ಲಿ ಅವರ ಸಂತತಿಯವರು ಅನೇಕ ಪೂಜಾ ಕಾರ್ಯಕ್ರಮಗಳನ್ನು ವಂಶವೃತ್ತಿಯಾಗಿ ಮಾಡುತ್ತಿರುವುದು ಕಂಡುಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಏಕಾಂತ ರಾಮಯ್ಯನ ಪರಂಪರೆಯು ಅಂತರವಳ್ಳಿ ಅಥವಾ ನೆಸ್ವಿಯೇ ಆಗಿರಲಿ ಅವನು ಮಾತ್ರ ಶೈವಧರ್ಮದ ಕಾಳಾಮುಖ ಪರಂಪರೆಗೆ ಸೇರಿದವನೆಂದು ಸ್ಪಷ್ಟವಾಗುತ್ತದೆ. ಇದು ಒಂದು ಶೈವಧರ್ಮದ ಶ್ರೇಷ್ಠತೆಯನ್ನು ಬಿಂಬಿಸುತ್ತದೆ ಎಂದು ಹೇಳಬಹುದಾಗಿದೆ.

## ಅನುಬಂಧ

- ಆಕಾರ ಗ್ರಂಥಗಳು
- ಏಕಾಂತ ರಾಮಯ್ಯನ ಕುರಿತ ಹಿರೇಕೆರೂರು ತಾಲೂಕಿನ ನಕ್ಷೆ
- ಶಾಸನ ಛಾಯಾಚಿತ್ರಗಳು

# ಆಕಾರ ಗ್ರಂಥಗಳು


**ಶಾಸನ ಸಂಪುಟಗಳು**

೧. Epigraphia Indica Vol -V ,XVI, XXI

2) Epigraphia Carnatika -Vol III, IV, XII, XIV

3) South Indian Inscription V- XV, XVII, XX

೩) Karnataka Iiscription_-Vol. VI

**ಆಧಾರ ಗ್ರಂಥಗಳು**

೧) ಕಡಪಟ್ಟಿ ಎಂ.ಎಸ್. (ಡಾ.) ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ. ಕರ್ನಾಟಕ ಇತಿಹಾಸ ಸಂಶೋಧನ ಮಂಡಲ ಧಾರವಾಡ

೨) ಕೈದಾಳ ರಾಮಸ್ವಾಮಿ ಗಣೇಶ. (ಡಾ.) ಶಾಸನ ಸರಸ್ವತಿ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ ಧಾರವಾಡ– ೨೦೦೭–೦೮

೩) ಗೀತಾ ಬಿ.ಎಸ್. ಕರ್ನಾಟಕದ ಸಾಂಸ್ಕೃತಿಕ ಸಂಘರ್ಷ ಒಂದು ಅಧ್ಯಯನ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೮

೪) ಚಿದಾನಂದ ಮೂರ್ತಿ (ಡಾ.) ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಸ್ವಪ್ನ ಬುಕ್ ಹೌಸ್ ಬೆಂಗಳೂರು.೨೦೧೬

೫) ದೀಕ್ಷಿತ. ವಿ.ಜಿ, ಜ್ಞಾನಾನಂದ. ಜಿ. ಸಂಕೃತಿ ಸಾಹಿತ್ಯ ಪ್ರಸಾರ ಸಮಿತಿ. ಕೆಜಿಎಫ್.೧೯೯೨

೬) ದೇವಿಪ್ರಸಾದ ಚಟ್ಟೋಪಾಧ್ಯಾಯ. ಭಾರತೀಯ ದರ್ಶನಗಳು. ನವಕರ್ನಾಟಕ ಪ್ರಕಾಶನ ಬೆಂಗಳೂರು ೧೯೯೬

೭) ನಂದಿಮಠ ಎಸ್.ಸಿ. ವೀರಶೈವ ಧರ್ಮದ ಕೈಪಿಡಿ. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ೧೯೯೦

೮) ನಾಗಬೂಷಣ. ಸಿ. (ಡಾ.) ಏಕಾಂತ ರಾಮಯ್ಯ ಮತ್ತು ಆದಯ್ಯ. ಒಂದು ತುಲನಾತ್ಮಕ ಅಧ್ಯಯನ. ಬಸವ ಸಮಿತಿ, ಬಸವ ಭವನ, ಬಸವೇಶ್ವರ ವೃತ್ತ ಬೆಂಗಳೂರು.೨೦೦೫

೯) ಪಾಟೀಲ ಭೋಜರಾಜ, 'ಹಿರೇಕೆರೂರು ತಾಲೂಕು ಗ್ರಾಮನಾಮ ಅಧ್ಯಯನ' ಶೀವಯೋಗಿ ಸಿದ್ಧಲಿಂಗ ಪ್ರಕಾಶನ ಹಂಸಭಾವಿ ೨೦೧೨

೧೦) ಬಸವರಾಜ್ ಎಲ್. ಅಲ್ಲಮನ ವಚನ ಚಂದ್ರಿಕೆ. ನಳಿನೀ ಶಂಕರ ಪ್ರಕಾಶನ ಮೈಸೂರು.೧೯೬೦

೧೧) ಬಸವರಾಧ್ಯ. ಎನ್. ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ. ಪ್ರಕಾಶನ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ೧೯೭೩

೧೨) ಮಲ್ಲಿಕಾರ್ಜುನ ಕೆ. ಮಾಳಿ ಎಸ್.ಎಸ್. ಡಾ ಬಿ ಆರ್ ಹಿರೇಮಠರ ಶಾಸನ ಅಧ್ಯಯನ. ಪ್ರಸಾರಾಂಗ ಹಂಪಿ ೨೦೧೨

೧೩) ಮಿರ್ಜಿ ಅಣ್ಣಾರಾಯ. ಜೈನಧರ್ಮ. ವಿಜಯ ಮುದ್ರಣಾಲಯ ಧಾರವಾಡ.೧೯೫೨

೧೪) ಮುನಿಶ್ರೀ ೧೦೮ ಕುಮುದನಂದಿ ಮಹಾರಾಜರು. ಅನೇಕಾಂತವಾದ ಮತ್ತು ಸ್ವಾದ್ವಾದ. ದಿವ್ಯದ್ವನಿ ಪ್ರಕಾಶನ ಸೇಡಬಾಳ.೧೯೮೭

೧೫) ಶಿವರುದ್ರಸ್ವಾಮಿ ಎಸ್.ಎನ್. (ಡಾ.) ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ. ಪೌರಸ್ತ್ಯ ಪ್ರಕಾಶನ. ತಿಪಟೂರು:: ಮೈಸೂರು.೨೦೦೯

೧೬) ಶೇಷ ನವರತ್ನ. ಜಾಗತಿಕ ಧರ್ಮಗಳು. ಸಮಾಜ ಪುಸ್ತಕಾಲಯ, ಧಾರವಾಡ,೧೯೯೮.

೧೭) ಸುಂಕಾಪುರ ಎಂ.ಎಸ್. ಮಹಾಕವಿ ಹಂಪೆಯ ಹರಿಹರ ದೇವಕೃತ ನೂತನ ಪುರಾತನ ರಗಳೆಗಳು. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ೧೯೭೬

೧೮) ಹಿರೇಮಠ ಎಸ್.ಎಸ್. ಪ್ರೊ ಲಾಕುಳ ದರ್ಶನ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೬

## ಅಪ್ರಕಟಿತ ಪಿ.ಹೆಚ್ ಡಿ. ಪ್ರಬಂಧಗಳು

೧) ಆಚಾರಿ ಮಂಜುಳ. ಕಾಳಾಮುಖ ಪರಂಪರೆ ಮತ್ತು ಮೂರುಜಾವಿ ಪೀಠ ಸಾಂಸ್ಕೃತಿಕ ಅಧ್ಯಯನ. ಕನ್ನಡ ವಿ.ವಿ.ಹಂಪಿ. ೨೦೦೫

೨) ಚಾಮರಾಜ ಕಮ್ಮಾರ. ಹಾವೇರಿ ಜಿಲ್ಲಾ ಕಾಳಾಮುಖ ಪರಂಪರೆ ಸಾಂಸ್ಕೃತಿಕ ಅಧ್ಯಯನ ಕನ್ನಡ ವಿ.ವಿ. ಹಂಪಿ. ೨೦೧೭.

೩) ಯಲ್ಲಣ್ಣ.ಕೆ. ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ.. ಪಿ,ಹೆಚ್.ಡಿ. ಅಪ್ರಕಟಿತ ಗ್ರಂಥ ಹಂಪಿ.ವಿವಿ

ಏಕಾಂತ ರಾಮಯ್ಯನ ಕುರಿತ ಹಿರೇಕೆರೂರು ತಾಲೂಕಿನ ನಕ್ಷೆ



ಬ್ರಹ್ಮಶ್ವರ ದೇವಾಲಯ ಅಬ್ಬಲೂರು



ಸೋಮೇಶ್ವರ ದೇವಾಲಯ ಅಬ್ಬಲೂರು



ಏಕಾಂತ ರಾಮಯ್ಯ ಶಿರಸ್ಸ ಪವಾಡ ಮಾಡಿದ ಸ್ಥಳ, ಬ್ರಹ್ಮೇಶ್ವರ ದೇವಾಲಯ ಅಬ್ಬಲೂರು



ಸಪ್ತಮಾತೃಕೆಯರ ಶಿಲ್ಪ



ಬಂದಳಿಕೆ ಶಾಸನ



ಭೋಗಾವಿ ಶಾಸನ



ವೀರಬೊಮ್ಮಜ್ಜನವರು ಶಿರಸ್ಸವಾಡ ಮಾಡಿದ ನಂತರ
ಶಿರವು ಕಲ್ಲಾಗಿರುವುದು



ಶಿರದ ಹಿಂಭಾಗ

